**ತುಮಕೂರು ನಗರದಲ್ಲಿ ನೂತನವಾಗಿ ನಿರ್ಮಿಸಿರುವ**
**ಅತ್ಯಾಧುನಿಕ ಸೌಕರ್ಯಗಳನ್ನೊಳಗೊಂಡ ವಸತಿಗೃಹ**

# ಹೋಟೆಲ್ ಶ್ರೀ ವಿಘ್ನೇಶ್ವರ ಕಂಫರ್ಟ್

ಸರ್ಕಾರಿ ಕಾಲೇಜು ಮುಂಭಾಗ, ಬಿ.ಹೆಚ್. ರಸ್ತೆ, ತುಮಕೂರು-1
ದೂರವಾಣಿ : 2255883, 2257770, 2257774, 2257772 ಫ್ಯಾಕ್ಸ್ : 2255873



- ಮೂರು ವಿವಿಧ ದರ್ಜೆಯ 50 ಸುಸಜ್ಜಿತ ಕೊಠಡಿಗಳು
- ವಿಶೇಷ ವ್ಯವಸ್ಥೆಯ ಹವಾನಿಯಂತ್ರಿತ ಕೊಠಡಿಗಳು
- ಹವಾನಿಯಂತ್ರಿತ ಮಿನಿ ಕಾನ್ಫರೆನ್ಸ್ ಹಾಲ್
- ವಿಶಾಲವಾದ ಪಾರ್ಕಿಂಗ್ ವ್ಯವಸ್ಥೆ
- ಪ್ರತಿ ಕೊಠಡಿಗೆ ಟಿ.ವಿ., ಟೆಲಿಫೋನ್ ಸಂಪರ್ಕ
- ಹವಾನಿಯಂತ್ರಿತ ವಿ.ಐ.ಪಿ. ರೂಂ.
- ಶಾಶ್ವತ ವಿದ್ಯುತ್ ವ್ಯವಸ್ಥೆ
- ಪರಿಣಿತ ಸಿಬ್ಬಂದಿಯ ವಿನೀತ ಸೇವೆ

**ಲಿಫ್ಟ್ ಸೌಲಭ್ಯವಿದೆ**

**ಹವಾನಿಯಂತ್ರಿತ ಉಪಹಾರ ಗೃಹ**

ಮಾಲೀಕರು : ಎಸ್.ಜಿ. ಚಂದ್ರಮೌಳಿ, ಗ್ರಾನೈಟ್ ಉದ್ಯಮಿ







ಸಂಪಾದಕರು :
**ಹೆಚ್.ವಿ. ವೀರಭದ್ರಯ್ಯ**
ಸಹ ಸಂಪಾದಕರು :
**ಎಚ್.ಎಸ್. ಸಿದ್ಧಗಂಗಪ್ಪ**
ಸಹಾಯಕ ಸಂಪಾದಕರು :
**ಕೆ.ಬಿ. ಶಿವಶಂಕರಯ್ಯ**
ಸಂಚಾಲಕರು :
**ಎಂ. ರೇಣುಕಾರಾಧ್ಯ**
ವಿತರಕರು :
**ಆರ್.ಎಸ್. ಮಲ್ಲೇಶಪ್ಪ**
ಪ್ರಕಾಶಕರು :
**ಹೆಚ್.ಬಿ. ಗಂಗಾಧರಯ್ಯ**
**ಜಿ.ಆರ್. ಶಂಕರಪ್ಪ**
ಛಾಯಾಚಿತ್ರ ಸಂಗ್ರಾಹಕರು :
ಸಿ. ಕುಮಾರಸ್ವಾಮಿ
ಪ್ರಕಾಶನ :
**ಹಳೆಯ ವಿದ್ಯಾರ್ಥಿಗಳ ಸಂಘ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ –572 104.
ಮುದ್ರಕರು:
**ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಆಫ್‌ಸೆಟ್ ಮುದ್ರಣಾಲಯ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು–572 104.
ವಿಳಾಸ :
**"ಸಂಪಾದಕರು"**
**'ಸಿದ್ಧಗಂಗಾ' ಮಾಸಪತ್ರಿಕೆ**
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ–572 104
ದೂ: 0816–2282322.


ಲೇಖಕರ ಅಭಿಪ್ರಾಯಗಳು
ಪತ್ರಿಕೆಯ ಅಭಿಪ್ರಾಯಗಳಲ್ಲ



॥ ಓಂ ಶ್ರೀ ಗುರುಬಸವಲಿಂಗಾಯ ನಮಃ ॥
**ಆವಾವ ಕಾಯಕವ ಮಾಡಿದರು ಬಸವೇಶ**
**ಆವಗಂ ಶರಣರನು ಸೇವಿಪೆನು ಬಸವೇಶ**

# ಸಿದ್ಧಗಂಗಾ


**ಸಂಪುಟ : ೫೨ ಮೇ ೨೦೧೬ ಸಂಚಿಕೆ : ೦೫**


## ಒಳಪುಟಗಳಲ್ಲಿ .................




**ಚಂದಾ ವಿವರ : ವಾರ್ಷಿಕ ಚಂದಾ ರೂ. 200/–**
**ಆಜೀವ ಸದಸ್ಯತ್ವ ರೂ. 1500/– ಬಿಡಿ ಪ್ರತಿ ರೂ. 12.00**



# ಬಸವ ಜಯಂತಿ

ಮೇ ೯ ಅಕ್ಷಯ ತೃತೀಯಾ ಬಸವಣ್ಣನವರ ಸ್ಮರಣೋತ್ಸವ ಸಂಭ್ರಮ. ಲೋಕ ಕಂಡ ಲೋಕಮಾನ್ಯ ಮಹಾಪುರುಷ ಬಸವಣ್ಣನವರು. ಹನ್ನೆರಡನೆಯ ಶತಮಾನ ನೀಡಿದ ಅಮೃತಸಿರಿ. ಸಂಸಾರವನ್ನು ಶಿವಯೋಗ ಮುಖವಾಣಿಸಿದ ಪರಿವರ್ತನ ಪುಣ್ಯಶಕ್ತಿ. ಜಾತಿ ಬಾಧ್ಯಕೆ ಪರಿಹಾರ ನೀಡಿದ ಸಮಾಜ ಸುಧಾರಕ. ವಿಶ್ವ ವಿಭೂತಿಗಳ ಪಂಕ್ತಿಯಲ್ಲಿ ಮನ್ನಣೆ ಪಡೆದುಕೊಂಡ ಮಹಾನುಭಾವ. ವಚನ ವೇದಗಳ ಮೂಲಕ ಸಾಹಿತ್ಯದ ದಿಕ್ಕನ್ನು ಬದಲಿಸಿದ ಕ್ರಾಂತಿಕಾರ. ಮರ್ತ್ಯಲೋಕವನ್ನು ಕಣ್ಣಿಗೊತ್ತಿಕೊಂಡು ನಮಸ್ಕರಿಸಿದ ಧೀರಮಂದಾರ. 'ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರೆಂದ' ನ್ಯಾಯ ನಿರ್ಣಯವಂತ. "ಕಳಬೇಡ ಕೊಲಬೇಡ, ಹುಸಿಯ ನುಡಿಯಲುಬೇಡ, ತನ್ನ ಬಣ್ಣಿಸಬೇಡ, ಇದಿರ ಹಳಿಯಲುಬೇಡ, ಮುನಿಯಬೇಡ, ಅನ್ಯರಿಗೆ ಅಸಹ್ಯಪಡಬೇಡ" ಎಂಬ ಸಪ್ತಶೀಲಗಳನ್ನು ಕೊಟ್ಟ ಸೂತ್ರಪುರುಷ, ಕಾಯಕ, ದಾಸೋಹ ಮಂತ್ರಗಳನ್ನಿತ್ತ ಮಂತ್ರಪುರುಷ.

ಶ್ರೀಮಠ ಸಿದ್ಧಗಂಗಾ ಬಸವ ತತ್ವದ ಬೆಳಕಿನಲ್ಲಿ ನಡೆದಿರುವ ಸೇವಾ ಸಂಸ್ಥೆ. ಕಾಯಕ ದಾಸೋಹಕ್ಕೆ ತನ್ನನ್ನು ಅರ್ಪಿಸಿಕೊಂಡಿರುವ ಪ್ರಯೋಗಶಾಲೆ. ಬಸವ ತತ್ವ ಪ್ರಚಾರಕ್ಕಾಗಿಯೇ ನಾಟಕ ಸಂಸ್ಥೆಯನ್ನು ರೂಪಿಸಿಕೊಂಡು ಕರ್ನಾಟಕದ ಉದ್ದಗಲದಲ್ಲಿ ಅಲ್ಲದೆ, ಮಹಾರಾಷ್ಟ್ರ, ಆಂಧ್ರ, ತಮಿಳು ನಾಡುಗಳಲ್ಲಿ ನಾಟಕ ಪ್ರದರ್ಶನದ ಮೂಲಕ 'ವಿಪ್ರಮೊದಲು ಅಂತ್ಯಜನವರೆಗೆ ಶಿವಭಕ್ತರಾದವರೆಲ್ಲರೊಂದೇ" ಎಂದು ಪ್ರಚಾರಮಣಿಹದಲ್ಲಿ ಒಂದು ಸಾವಿರಕ್ಕೂ ಹೆಚ್ಚು ಪ್ರದರ್ಶನಗಳನ್ನು ನೀಡುತ್ತ ಮುನ್ನಡೆದಿರುವ ಕಲಾಮುಖಿ. ಎಂಭತ್ತೆರಡು ದೃಶ್ಯಗಳ ಮೂಲಕ ಐವತ್ತೆರಡು ಕಲಾವಿದರೊಂದಿಗೆ ರಾತ್ರಿ ಒಂಭತ್ತೂವರೆಗೆ ಘಂಟೆಯಿಂದ ಮುಂಜಾನೆ ಐದೂವರೆ ಘಂಟೆಯಾದಡೆಗೆ ಬಸವಣ್ಣನವರ ಆಮೂಲಾಗ್ರ ಜೀವನವನ್ನು ಅಕ್ಷರಸ್ಥ, ಅನಕ್ಷರಸ್ಥ ಗ್ರಾಮೀಣ ಬಂಧು ಭಗಿನಿಯರಿಗೆ ಪರಿಚಯಿಸಿಕೊಡುತ್ತಿರುವ ಶ್ರೀ ಸಿದ್ಧಲಿಂಗೇಶ್ವರ ನಾಟಕ ಮಂಡಳಿಯ ವಿನಮ್ರ ಸೇವೆ. ಶ್ರೀಮಠದ ಕಾರಣಿಕ ಪುರುಷರಾದ ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಯವರ ಕಣ್ಣೆಚ್ಚರಿಕೆಯಲ್ಲಿ ಸಾಗಿ ಬಂದಿರುವ ಯೋಜನೆ. ಪೂಜ್ಯಪಾದರು ನಾಟಕದ ಉದ್ದಕ್ಕೂ ಕುಳಿತಿದ್ದು ಸಲಹೆ ಸೂಚನೆಗಳನ್ನು ನೀಡುತ್ತ ೧೦೯ನೆಯ ತುಂಬು ವಯಸ್ಸಲ್ಲೂ ಪಾತ್ರಧಾರಿಗಳಾದ ಶಿಕ್ಷಕರನ್ನು ಮತ್ತು ವಿದ್ಯಾರ್ಥಿಗಳನ್ನು ಆಶೀರ್ವದಿಸುತ್ತಲಿರುವುದು ಮಹಾಭಾಗ್ಯ. ಬಸವತತ್ವ ಪಾಲನೆಯಿಂದ ಸಮಾಜ ಮುನ್ನಡೆಯಬೇಕೆಂಬ ಮಹದಾಶಯ ಶ್ರೀಗಳವರಿಗೆ. ಬಸವ ಪರವಾದ ಸಾಹಿತ್ಯವನ್ನು ಸದಾ ಅಭ್ಯಾಸ ಮಾಡುವ ಪೂಜ್ಯರಿಗೆ ಆತ್ಮಸಂತೋಷ.

ಶ್ರೀಮಠದ ಅಧ್ಯಕ್ಷರಾಗಿರುವ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರೂ ತಮ್ಮ ಗುರುಗಳ 'ಗುರುಪಥ'ದಲ್ಲಿ ಮುನ್ನಡೆಯುವ ಮಹದಾಶೆ. ಬಸವ ಚಿಂತಕರಾಗಿ, ಸೇವಾ ತತ್ಪರರಾಗಿ, ಶ್ರೀಮಠವನ್ನು ಬಸವ ಮಾರ್ಗದಲ್ಲಿ ಕ್ರಮಿಸಲು ಸೇವಾಶೀಲರಾಗಿ ಆಶೀರ್ವದಿಸುತ್ತಿರುವುದು ನಾಡಿನ ಪುಣ್ಯವಾಗಿದೆ.

'ಸಿದ್ಧಗಂಗಾ' ನಾಡಿನ ಎಲ್ಲರಿಗೂ ಬಸವ ಜಯಂತಿಯ ಪುಣ್ಯ ಸಂದರ್ಭದಲ್ಲಿ ಶುಭಾಶಯಗಳನ್ನು ಕೋರುತ್ತದೆ. ಜಾನಪದ ಹಿರಿಯ ವಿದ್ವಾಂಸರಾದ ಡಾ. ಗೊ.ರು.ಚ. ರವರಿಗೆ ಪ್ರಸಕ್ತ ಸಾಲಿನ 'ರಾಷ್ಟ್ರೀಯ ಬಸವ ಪುರಸ್ಕಾರ' ಪ್ರಶಸ್ತಿ ದೊರೆತಿರುವುದಕ್ಕೆ ಅಭಿನಂದನೆಗಳು.

**ಪ್ರೊ. ಹೆಚ್.ವಿ. ವೀರಭದ್ರಯ್ಯ**
ಸಂಪಾದಕರು





# ವಚನ ಸಾಹಿತ್ಯ – ಬಸವಣ್ಣನವರು



ವಚನ ಸಾಹಿತ್ಯ ಅನುಭಾವಿಗಳ ಸಾಹಿತ್ಯ. ಅದು ಅಡಂಬರಕ್ಕಾಗಿಯಾಗಲೀ ಪ್ರದರ್ಶನಕ್ಕಾಗಿಯಾಗಲೀ, ಪ್ರಚಾರ ಪ್ರಿಯತೆಗಾಗಿಯಾಗಲೀ ಬಂದದ್ದಲ್ಲ. ಸತ್ಯ ದರ್ಶನಕ್ಕಾಗಿ, ಆತ್ಮಸಾಕ್ಷತ್ಕಾರಕ್ಕಾಗಿ, ಚಿತ್ತ ಶುದ್ಧಿಯ ಅಭಿವ್ಯಕ್ತಿಯಾಗಿ, ಅಮೃತಗಣ ದೇವಗಣ ಎನ್ನದೆ, ಸಾಧಕನ, ಅನುಭಾವಿಯ, ಬಗೆಗೆನುಗುಣವಾಗಿ ಅವತರಿಸಿದ್ದು. ಭಾವಕ್ಕನುಗುಣವಾಗಿ ಭಾಷೆಯನ್ನು ಸಂಸ್ಕರಣಗೊಳಿಸಿದ್ದು ಅದರ ವಿಶೇಷ.

ಹನ್ನೆರಡನೆಯ ಶತಮಾನದಲ್ಲಿ ಸೃಷ್ಟಿಯಾದ ವಚನ ಸಾಹಿತ್ಯ, ಮಹೋನ್ನತವಾದ ಜೀವನ ಮೌಲ್ಯಗಳನ್ನು ಸಾಕಾರಗೊಳಿಸುವ ಮಾಧ್ಯಮವಾಯಿತು. ಅಂತೆಯೇ ಲೋಕ ಕಲ್ಯಾಣದಲ್ಲಿ ಆತ್ಮಕಲ್ಯಾಣವನ್ನು ಕಾಣುವ ಶ್ರೇಷ್ಠ ದೃಷ್ಟಿಯನ್ನು ನೀಡಿತು. ಜೀವನೋತ್ಸಾಹ, ಜೀವನ ಪ್ರೀತಿ, ಜೀವ-ಶಿವರ ಸಂಬಂಧವನ್ನು ತೆರೆದು ತೋರಿತು. ಅನುಭಾವವೇ ಅರಿವಿಗೆ ಆಶ್ರಯವಾಗಿ, ಸ್ವಾನುಭಾವದಿಂದ ಉಪನಿಷದ್ರಹಸ್ಯಗಳನ್ನು ಬಯಲು ಮಾಡಿತು.

ಬಸವಣ್ಣನವರು ಲೋಕಪೂಜ್ಯರು, ಜಗತ್ತು ಕಂಡ ವಿಸ್ಮಯ. ಅವರದು ಬೆಳಕಿನ ನುಡಿ, ವ್ಯಷ್ಟಿ-ಸಮಷ್ಟಿಗಳ ಸಮನ್ವಯ, ಅಂಗ ಲಿಂಗಗಳ ಸಂಗಮ, ಇಹಪರಗಳ ಜೋಡಣೆ, ಗೃಹಸ್ಥ ಜೀವನದ ಪರಮ ಪಾವಿತ್ರ್ಯತೆ, ಮೇಲು ಕೀಳುಗಳ ಉಚ್ಚಾಟನೆ, ಕಾಯಕ ದಾಸೋಹಗಳ ಶಿವಪಥ, ಅಧ್ಯಾತ್ಮ ನಿಷ್ಕ್ರಿಯತೆಯನ್ನು ಬೋಧಿಸುವ ಮಾಧ್ಯಮವಲ್ಲವೆಂಬ ಅರಿವು, ಜ್ಞಾನ-ಕ್ರಿಯೆಗಳ ಸಂಗಮ, ಅಲ್ಲಿ-ಇಲ್ಲಿ ಸಲ್ಲುವ ಜೀವನಕ್ರಮ, ವ್ಯಕ್ತಿ ಉದ್ಧಾರಕ್ಕೆ, ಸಂಪೂರ್ಣತೆಗೆ ವಿಶ್ವವಿಭೂತಿ ಬಸವ ತತ್ವಗಳ ಅನುಸರಣೆಯೇ ಪರಿಪೂರ್ಣ ಮಾರ್ಗ.

ದಲಿತ ಸೂರ್ಯ ಬಸವಣ್ಣ ಜಾಗತಿಕ ಇತಿಹಾಸದ ಉಜ್ವಲ ಧರ್ಮ ದ್ರಷ್ಟಾರ. ಸ್ವಾಮಿ ವಿವೇಕಾನಂದರಿಗಿಂತ, ಮಹಾತ್ಮ ಗಾಂಧೀಜಿಯವರಿಗಿಂತ, ಡಾ. ಅಂಬೇಡ್ಕರ್‌ರಿಗಿಂತ ಮೊದಲು ಅಸ್ಪೃಶ್ಯತೆಯ ಬಗ್ಗೆ ವಿರೋಧ ವ್ಯಕ್ತಪಡಿಸಿದ, ಹೋರಾಟ ನಡೆಸಿದ, ಅವರೊಡನೆ ತಮ್ಮನ್ನು ಸಮೀಕರಿಸಿಕೊಂಡ, ಅಸ್ಪೃಶ್ಯರ ಉದ್ಧಾರದಲ್ಲಿ ಅತ್ಮ ಸಾಕ್ಷಾತ್ಕಾರ ಕಂಡುಕೊಂಡ, ಪದವಿ ಪಟ್ಟವನ್ನೂ ತ್ಯಾಗ ಮಾಡಿದ ಆದರ್ಶ ಪುರುಷ.

ಇತಿಹಾಸದಲ್ಲಿ ೧೨ನೆಯ ಶತಮಾನ ಬೆಳಕಿನ ಯುಗ. ಅದಕ್ಕೆ ಕಾರಣರಾದವರು ಬಸವಣ್ಣನವರು. ಆ ಮಹಾನುಭಾವರ ವಿಚಾರಧಾರೆ ಎಂದೆಂದಿಗೂ ಪ್ರಸ್ತುತ. ಕಾಲ-ದೇಶಗಳನ್ನು ಗೆದ್ದು ನಿಂತಿವೆ ಬಸವತತ್ವಗಳು. ಅವು ನಿತ್ಯನೂತನ; ಸತ್ಯದರ್ಶನವಾಗಿವೆ. ಶತ ಶತಮಾನಗಳಿಂದ ಹೆಪ್ಪುಗಟ್ಟಿದ ಚಿಂತನೆಗಳನ್ನು ಕಡೆದು ನವನೀತ ತೆಗೆದ ವಿಚಾರಶೀಲ ಬಸವಣ್ಣನವರು ಮಾಡಿದ ಮಹೋನ್ನತ ಬದಲಾವಣೆ ಎಂದರೆ ಜನ ಜಾಗೃತರಾಗುವಂತೆ ಮಾಡಿದ್ದು. ಜನರನ್ನು ತಿದ್ದುವ ಮಹಾಮಣಿಹದಲ್ಲಿ ಅರ್ಪಣಾ ಮನೋಭಾವದಿಂದ ಕ್ರಿಯಾಶೀಲರಾದ ಕರ್ಮಚಾರಿ, ಆಚಾರ್ಯಶ್ರೇಷ್ಠ, ಸಮಾಜ ವಿಜ್ಞಾನಿ, ರಾಜಕೀಯ ದಾರ್ಶನಿಕ ಬಸವಣ್ಣನವರು ಪ್ರಜಾಪ್ರಭುತ್ವವಾದಿ.

☐

## ಶ್ರೀ ಸಿದ್ಧಲಿಂಗೇಶ್ವರ ವಚನ



*ಅಯ್ಯಾ ವಾಕನು ಮೀರಿ, ಮನಸನು ಮೀರಿ,*
*ಅಕ್ಷರಂಗಳನು ಮೀರಿ, ಜ್ಞಾನವನು ಮೀರಿ ತೊರುವ,*
*ನಿರುಪಮ ವಸ್ತುವೆಂಬುತ್ತಿದ್ದೀರಿ,*
*ಅದು ರೂಪಾಗಿ ಎನ್ನ ಕರಸ್ಥಲಕ್ಕೆ ಇಷ್ಟವಾಗಿ ಮನಸ್ಥಲಕ್ಕೆ ಪ್ರಾಣವಾಗಿ,*
*ಭಾವದಲ್ಲಿ ಭರಿತವಾಗಿ ತೀವಿ ಪರಿಪೂರ್ಣನಾಗಿ*
*ಎದೆ ಕಡೆಯ್ಲಿದಪ್ಪ ಭೇದವ ಕರುಣಿಸಿದಿರಯ್ಯಾ*
*ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ।*

ಅಯ್ಯಾ ಎಲೇ ಲಿಂಗವೆ, ವಾಕನು ಮೀರಿ-ವಾಕ್ಯದ ಶೋತ್ರವನು, ಮೀರಿ-ಅತಿಕ್ರಮಿಸಿ, ಮನಸ್ಸನು ಮೀರಿ ಮನದ ಜ್ಞಾನವನು ಅತಿಕ್ರಮಿಸಿ, ಅಕ್ಷರಂಗಳನು - ಐವತ್ತೆರಡು ಅಕ್ಷರಂಗಳನು, ಮೀರಿ-ಅತಿಕ್ರಮಿಸಿ, ಜ್ಞಾನವನು-ಅರಿವಂತ ಜ್ಞಾನವನು ಮೀರಿ-ಅತಿಕ್ರಮಿಸಿ, ತೋರುವ-ಕಾಣಿಸುವ, ನಿರುಪಮ ವಸ್ತುವೆಂಬುತ್ತಿದ್ದೀರಿ - ವಸ್ತುಮಯ ಸ್ವರೂಪವಾದ ಬ್ರಹ್ಮವನು ಹೇಳುತ್ತಿದ್ದೀರಿ, ಅದು ರೂಪಾಗಿ - ಅದು ಸಾಕಾರವಾಗಿ, ಎನ್ನ ಕರಸ್ಥಲಕ್ಕೆ - ವಾಮಭಾಗದ ಕರಸ್ಥಲಕ್ಕೆ, ಇಷ್ಟ-ಇಷ್ಟಲಿಂಗವಾಗಿ, ಮನಸ್ಥಲಕ್ಕೆ ಪ್ರಾಣವಾಗಿ - ಮನದಂತರಂಗಕ್ಕೆ ಪ್ರಾಣಲಿಂಗವಾಗಿ, ಭಾವದಲ್ಲಿ-ಆತ್ಮಾಂದದಲ್ಲಿ, ಭರಿತನಾಗಿ ಪೂರ್ಣವಾದ ಭಾವಲಿಂಗವಾಗಿ, ತೀವಿ-ತ್ರಿವಿಧಂಗದಲ್ಲಿ ತ್ರಿವಿಧ ಲಿಂಗವು ತುಂಬಿ, ಪರಿಪೂರ್ಣವಾಗಿ, ಕಿಷ್ಕಿಂಧಮಯನಾಗಿ, ಎದೆಕದೆಯಲ್ಲಿದಿಪ್ಪ-ತ್ರಿವಿಧವಾದ ತ್ರಿವಿಧ ಲಿಂಗಕ್ಕೆ ನಡುಪರೆಯಿಲ್ಲದಿರುವ, ಭೇದವ ಕರುಣಿಸಿದಿರಿ, ಭೇದವ-ನಿಲುಕಡೆಯನು ಕರುಣಿಸಿದಿರಿ-ಕೃಪೆ ಮಾಡಿದಿರಿ, ಅಯ್ಯಾ ಎಲೇ ಲಿಂಗಕ್ಕೆ ಮಹಾಲಿಂಗ ಗುರು ಶಿವ ಸಿದ್ಧೇಶ್ವರ ಪ್ರಭುವೆ.

(ಕೃಪೆ: ತೋಂಟದಾರ್ಯ ವಚನ ವ್ಯಾಖ್ಯೆ- ಸಂಪಾದಕರು-ಡಾ॥ ಸಾ.ಶಿ. ಮರುಳಯ್ಯ, ಪ್ರಕಾಶಕರು, ಶ್ರೀ ತೋಂಟದ ಸಿದ್ಧಲಿಂಗೇಶ್ವರ ಕೈಂಕರ್ಯ (ದಾಸೋಹ) ಸೇವಾ ಸಂಘ (ರಿ.) ಎಡೆಯೂರು- ಕುಣಿಗಲ್ ತಾಲ್ಲೂಕು) ತುಮಕೂರು ಜಿಲ್ಲೆ.

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ



ಪಶುವಿನಲಿ ಪರಶಿವನ ಕಾಣ್ವಕಾರುಣ್ಯವೆ
ಶಿಶುವಿನಲಿ ಶಿವನ ನಗೆಯನು । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

'ಕರುಣಜಲ'ವನು ನೀಡಿ ಕೊರಡ ನೀ ಕೊನರಿಸಿದೆ
ಶರಣ ಮಾರ್ಗದಲಿ ನಡೆಸಿದೆ । ನನ್ನತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸರ್ವಾಂಗ ಲಿಂಗಿಯೇ ಸರ್ವಶಿವರೂಪಿಯೇ
ಸರ್ಗವ ಶಿವಮಾಳ್ಪ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ನೀ ನುಡಿದುದೆಲ್ಲ ಲಿಂಗ ನೀ ನೋಡಿದುದೆಲ್ಲ ಲಿಂಗ
ನುಡಿಸಿದುದೆಲ್ಲ ಶಿವಲಿಂಗ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಭಕ್ತಿದಾಸೋಹದ ಶಕ್ತಿ ಶಿವಸೂರ್ಯನೆ
ಶಕ್ತಿರಹಿತ ರಾಜ ಶಿವಯೋಗಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಸಹಬಾಳ್ವೆ ಸಮಬಾಳ್ವೆ ನೀನು ಕಲಿಸಿದಪ್ಪಲೆಯು
ಸಮ ಭಾವ ಸಮರಸ ಸಮನೋಟ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ತಾನಳಿವ ಮುನ್ನವೆ ಅರಿವು ಕೊಡುವುದೆಂದ
ಅಂಬಿಗಣ್ಣನ ನುಡಿಗೆ ಗುಡಿಯಾದೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅರಿದು ನುಡಿದವ ಜ್ಞಾನಿ, ನುಡಿದು ನಡೆದವ ಜ್ಞಾನಿ
ನುಡಿ ನಡೆಯ ಬೆಸದವ ಶಿವಜ್ಞಾನಿ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಅಷ್ಟಮದಗಳ ಮೆಟ್ಟಿ ಸತ್ವದ ಜತಮವ ಕುಟ್ಟಿ
ಹತ್ತು ದಿಕ್ಕಿಗೆ ಹರಿವ ಮನವ ಕಟ್ಟಿದ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

ಹೆಸರಿಲ್ಲದ ದೇವರ ಹೆಸರೊಲ್ಲದ ದೇವರ
ಹಸನಾಗಿ ತೋರಿದ ದೇವರೆ । ನನ್ನ ತಂದೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

- ಹೆಚ್.ವಿ. ವೀರಭದ್ರಯ್ಯ





## ಕ್ರಿಯಾಯೋಗ

- ಶ್ರೀ ಸಿದ್ಧೇಶ್ವರ ಸ್ವಾಮಿಗಳು *

ನಮ್ಮ ಸುತ್ತಮುತ್ತೆಲ್ಲಾ ಅನಂತವಾಗಿ ಹರಡಿದ ಈ ಜಗತ್ತು ಅತ್ಯಂತ ಸಂಕೀರ್ಣ. ಇದನ್ನು ತಿಳಿದುಕೊಳ್ಳಲು ಸಾಕಷ್ಟು ಪ್ರಯತ್ನ ಮಾಡುತ್ತಿದ್ದೇವೆ. ಕಣ್ಣು, ಬುದಿ ಮುಂತಾದ ಸಮರ್ಥ ಸಾಧನಗಳನ್ನು ಬಳಸುತ್ತ ಇದ್ದೇವೆ. ಆದರೂ ಈ ಸಂಕೀರ್ಣತೆಯನ್ನು ಸಂಪೂರ್ಣ ಅರಿತುಕೊಳ್ಳಲಾಗಿಲ್ಲ. ನಾವು ಯೋಜಿಸಿದಷ್ಟೂ ಗಹನತೆ ಹೆಚ್ಚುತ್ತಿದೆ. ತೋರಿಕೆಯಲ್ಲಿ ಎಲ್ಲವೂ ಸ್ಪಷ್ಟವಾಗಿರುವಂತೆ ಭಾಸವಾಗುತ್ತದೆ. ಆದ್ದರಿಂದಲೇ ಈ ಜಗತ್ತಿನ ಈ ರೂಪವನ್ನು ಕಂಡು ಕೆಲ ಸಂತರು ಇದನ್ನು **'ಮಾಯಿಕ'** ಎಂದು ಕರೆದರು. ಅಂದರೆ ಜಗತ್ತು ಅಸತ್ಯವಾಗಿದೆ ಎಂದಲ್ಲ. ಈ ಜಗತ್ತು ಹೀಗೆಯೇ ಇದೆ ಎಂದು ಖಚಿತವಾಗಿ ಹೇಳಬರದು ಎಂದರ್ಥ.

ನ್ಯೂಟನ್ ಗಿಡದ ಕೆಳಗೆ ಕುಳಿತಿದ್ದ. ಮೇಲಿನಿಂದ ಭೂಮಿಗೆ ಒಂದು ಕಾಯಿ ಬಿತ್ತು. ಆಗ ನ್ಯೂಟನ್ ಪ್ರಶ್ನೆಮಾಡಿದ, 'ಕೆಳಗೆ ಯಾಕೆ ಬಿತ್ತು?' ಸಾವಿರಾರು ವರುಷಗಳಿಂದ ಕಾಯಿಗಳು ಬಿದ್ದೇ ಬಿದ್ದಿವೆ. ಯಾರೂ ಆ ಪ್ರಶ್ನೆಯನ್ನು ಮಾಡಿಲ್ಲ. ಏಕೆಂದರೆ ಹಾಗೆ ಬೀಳುವುದು ಸಹಜ ಸಾಮಾನ್ಯ ಎನಿಸಿತ್ತು. ಸಾವಿರಾರು ವರ್ಷಗಳಿಂದ ಬುದಿವಂತರು ಇರಲಿಲ್ಲವೇನು? ಇದ್ದರು. ಬಹಳ ದೊಡ್ಡ ದೊಡ್ಡ ವಿದ್ವಾಂಸರು, ಘನ ಪಂಡಿತರು, ಚಿಂತಕರು ಇದ್ದರು. ಆದರೂ ಗೊತ್ತಾಗಲಿಲ್ಲ. ನ್ಯೂಟನ್ ಒಬ್ಬ ಸಾಮಾನ್ಯ ಯುವಕ. ಆಕಸ್ಮಿಕವಾಗಿ ನಡೆದ ಘಟನೆ ಚಿಂತನೆಗೆ ತೊಡಗಿಸಿತು.

Why it should fall to the ground?

Why it should not fly away into the sky?

ಕೆಳಗೆಯೇ ಏಕೆ ಬೀಳಬೇಕು? ಮೇಲೆ ಏಕೆ ಏರಬಾರದು? ಉತ್ತರಿಸುವ ಪ್ರಯತ್ನಮಾಡಿದ ಜೀವನದ ತುಂಬಾ. ವಿಶ್ವದ ಒಂದು ರಹಸ್ಯ ಗೊತ್ತಾಯಿತು! ದ್ರವ್ಯರಾಶಿಯ ಸುತ್ತಮುತ್ತೆಲ್ಲಾ ಒಂದು ಆಕರ್ಷಣಾ ವಲಯ ಹರಡಿರುತ್ತದೆ ಎಂಬ, ನಮಗೆ ಮೊದಲು ಗೊತ್ತಿಲ್ಲದ, ರಹಸ್ಯ ಹೊಳೆಯಿತು! ನಮಗಾರಿಗೂ ಕಾಣದ್ದು ಅವನಿಗೆ ಗೋಚರಿಸಿತು. ಆತನ ಶೋಧ ನಮಗೆ ತೃಪ್ತಿ ನೀಡಿತು.

ಅನಂತರ ಆ ವಿಷಯದಲ್ಲಿ ನಮಗೆಲ್ಲ ತಿಳಿದಿದೆ ಎನ್ನುವ ಹಾಗೆಯೇ ವರ್ತಿಸುತ್ತಿದ್ದೇವೆ. ನ್ಯೂಟನ್ ಹೇಳಿದ ಗುರುತ್ವಾಕರ್ಷಣೆ ಶಕ್ತಿಯ ಬಗೆಗೆ ನಾವು ಬೇಕಾದಷ್ಟು ಪ್ರಶ್ನೆ ಕೇಳಬಹುದು. ಕೇಳಿಲ್ಲ ಅಷ್ಟೇ. ಎಂತಲೇ ನಮಗೆ ಎಲ್ಲವೂ ಸ್ಪಷ್ಟವಾಗಿರುವಂತೆ ಭಾಸವಾಗುತ್ತದೆ. ಪ್ರಶ್ನೆ ಕೇಳುತ್ತ ಸಾಗಿದರೆ ಎಲ್ಲವೂ ಅಸ್ಪಷ್ಟ ಕ್ಲಿಷ್ಟವೆನಿಸುತ್ತದೆ! ಜಗತ್ತು ಏನಿದೆ ಎಂಬುದನ್ನು ಸಂಪೂರ್ಣ ಹೇಳಲಾಗದು. ಆದ್ದರಿಂದ ಇದು ಮಾಯೆ.

ಈ ಮನುಷ್ಯ ಒಳ್ಳೆಯವ, ಈ ಮನುಷ್ಯ ಕೆಟ್ಟವ ಎಂದು ಸುಲಭವಾಗಿ ನಿರ್ಣಯಿಸುತ್ತೇವೆ, ಹಿಂದೆ ಮುಂದೆ ಯೋಚಿಸದೆ. ಮಾತಿನ ಸತ್ಯಾಸತ್ಯದ ಶೋಧವನ್ನು ಮಾಡದೆ ನಿರ್ಣಯದ ಮಾತನಾಡುತ್ತೇವೆ. ನಿಜವಾಗಿ ಪರೀಕ್ಷಿಸ ಹೊರಟರೆ ನಮ್ಮ ನಿರ್ಣಯ ನಿಲ್ಲದು. ವ್ಯಕ್ತಿಯ ಬಹಿರಂಗ ಅಂತರಂಗಗಳನ್ನು ಸಂಪೂರ್ಣ ನೋಡಲಾಗದು ಎಂದಾಗ ನಮ್ಮ ಅಭಿಪ್ರಾಯ ಹೇಗೆ ಸತ್ಯವಾದೀತು? ವ್ಯಕ್ತಿ ಸಮಾಜಗಳ ಬಗೆಗೆ ನಾವು ಮೇಲೆ ತಿಳಿದಿರುತ್ತೇವೆಯೇ ವಿನಃ ಅಂತರಂಗವನ್ನಲ್ಲ. ಜಗತ್ತು ಅತ್ಯಂತ ಸಂಕೀರ್ಣ. ಚಿಕ್ಕ ವಸ್ತುವೂ ಕೂಡ ರಹಸ್ಯವೇ. ಬಿಡಿಸಿ, ನಮಗೆ ತಿಳಿಯದ ನೂರಾರು ಸಂಗತಿಗಳು. ನಮಗೆ ಕಂಡುದುದು ಅಲ್ಪ, ಕಾಣದ್ದು ಸಾಗರ!

ವಿಶ್ವ ಬರೀ ಸಂಕೀರ್ಣ ಅಲ್ಲ, ಪರಿಸಂಕೀರ್ಣ! ಅತ್ಯಂತ ಸಂಕೀರ್ಣ! ಎಲ್ಲವೂ ರಹಸ್ಯ; ಅದ್ಭುತ! ೧೦೦ ಕಿಲೋ ವಸ್ತುವನ್ನು ಹೆಗಲಮೇಲೆ ಹೊತ್ತುಕೊಂಡು ನಾಲ್ಕು ಹೆಜ್ಜೆ ಹೋಗಬೇಕಾದರೆ ಎಷ್ಟು ಕಷ್ಟ! ಆಕಾಶದೊಳಗೆ ಪ್ರಚಂಡ ಭಾರದ ಕಾಯಗಳು ಮತ್ತು ಸೂರ್ಯರು. ತೇಲುತ್ತಿವೆ ! ಉರುಳುತ್ತಿವೆ ! ಅಚ್ಚರಿ ! ಯಾರಿಗೂ ಪೂರ್ಣ ಗೊತ್ತಾಗದಂತಿದೆ ಈ ಜಗತ್ತು ! ಇಂತಹ ಜಗತ್ತನ್ನು ತಿಳಿದಿದ್ದೇವೆ ಎನ್ನಬಾರದು, ತಿಳಿದಿಲ್ಲ ಎಂದೂ ಹೇಳಬಾರದು ! ಅಲ್ಪ ಸ್ವಲ್ಪ ತಿಳಿದಿದೆ; ತಿಳಿದಿಲ್ಲ. ಕಂಡಿದೆ, ಕಂಡಿಲ್ಲ. ಇಂತಹ ಅದ್ಭುತ ವಿಶ್ವ ಇದು ! ಆದರೂ ಸಮಸ್ತ ವಿಶ್ವದ ಗುರಿಯೇ ಮನುಷ್ಯನ ಬದುಕು ! ಎಂಬ ಭ್ರಮೆಗೆ ಒಳಗಾಗಿದ್ದೇವೆ ! ನಾವು ಕೇಂದ್ರ. ಜಗತ್ತು ನಮ್ಮ ಸುತ್ತ ತಿರುಗುತ್ತಿದೆ ! ಎಂಥ 'ಅಹಂ'ತೆ ! ಎಲ್ಲವೂ ನಮಗಾಗಿ !

* ಜ್ಞಾನಯೋಗಾಶ್ರಮ, ಬಿಜಾಪುರ ಜಿಲ್ಲೆ.

ಸೂರ್ಯ ಚಂದ್ರ, ಗಾಳಿ ಆಕಾಶ ಎಲ್ಲವೂ ! ಈ ಭ್ರಮೆಯ ಮಾನವ ತನ್ನ ಹಿರಿಮೆಗಾಗಿ ಹೋರಾಡುತ್ತಾನೆ. ಈ ಜಗತ್ತಿನ ವಸ್ತುವಿನ ರಚನೆಯತ್ತ ಲಕ್ಷ್ಯ ಇಲ್ಲ. ನನ್ನ ಕಡೆ ನಿಮ್ಮ ಲಕ್ಷ್ಯ, ನಿಮ್ಮ ಕಡೆ ನನ್ನ ಲಕ್ಷ್ಯ. ಆದರೆ ವಿಶ್ವದ ಕಡೆ ಲಕ್ಷ್ಯ ಇಲ್ಲ.

ರೇಡಿಯಂ ಕಂಡುಹಿಡಿದರು ಮದಾಂ ಕ್ಯೂರಿ. ಅದು ಅದ್ಭುತವಾದ ಸಂಶೋಧನೆ. ಪಾರಿತೋಷಕ ಸಿಕ್ಕಿತು, ನೊಬೆಲ್. ಆದರೆ ಮದಾಂ ಕ್ಯೂರಿಯವರು ಆ ಪಾರಿತೋಷಕ ಪಡೆದ ನಂತರ ಲೋಕದ ಎದುರು ಅದನ್ನು ಪ್ರದರ್ಶಿಸಲಿಲ್ಲ. ಒಂದು ಹಳ್ಳಿಯ ಮನೆಗೆ ಹೋಗಿ ವಾಸಮಾಡಿಕೊಂಡಿದ್ದರು. ಅಲ್ಲಿಗೆ ಪತ್ರಿಕೆಯವರೊಬ್ಬರು ಅವರ ಸಂದೇಶಕ್ಕಾಗಿ ಹೋದರು. ನೊಬೆಲ್ ಪಾರಿತೋಷಕ ಪಡೆದ ವಿಜ್ಞಾನಿ ಹೆಣ್ಣುಮಗಳು ಕೈಯೊಳಗೆ ಗುದ್ದಲಿ ಹಿಡಿದು ಕೆಲಸಮಾಡುತ್ತಿದ್ದಳು. ಸಾದಾ ಬಟ್ಟೆ, ಮಾಸಿತ್ತು. ಧೂಳು ಬಿದ್ದಿತ್ತು. ಸಣ್ಣ ಪುಟ್ಟ ಪದವಿ ಪ್ರಶಸ್ತಿ ಸಿಕ್ಕರೇ ಊರ ತುಂಬ ಪ್ರದರ್ಶಿಸುವ ನಾವೆಲ್ಲಿ? ಕ್ಯೂರಿ ಎಲ್ಲಿ? ಪತ್ರಿಕೆಯವ ಆಕೆಯ ಸಾಧನೆಯನ್ನು ಪ್ರಶಂಸಿಸಿ, ಆ ಸಂದರ್ಭದಲ್ಲಿ ಒಂದು ಸಂದೇಶ ಕೊಡಿ ಜಗತ್ತಿಗೆ ಎಂದ. *'ವ್ಯಕ್ತಿಗಳಿಗಿಂತ ವಿಶ್ವದ ಸಂಗತಿಗಳಲ್ಲಿ ಹೆಚ್ಚು ಆಸಕ್ತಿ ತಾಳಿ'* ಎಂದು ಆದೇಶವಿತ್ತಳು! *"ನಾನು ದೊಡ್ಡವಳಲ್ಲ. ಜಗತ್ತು ದೊಡ್ಡದು. ನಾನಿಲ್ಲದಿದ್ದರೂ ಇನ್ನೊಬ್ಬರು ಸಂಶೋಧಿಸುತ್ತಾರೆ. ನನ್ನನ್ನು ಉಪೇಕ್ಷಿಸಿರಿ. ಜಗತ್ತನ್ನು ತಿಳಿವ ಆಸಕ್ತಿ ತೋರಿರಿ."* ಇದು ಆಕೆಯ ಆಶಯ.

'ಸಾವು' ಭೂಮಿಕೆಯನ್ನು ಸಿದಗೊಳಿಸುತದೆ. ಅದರಲ್ಲಿ ಜೀವನವು ಮೊಳೆಯುತ್ತದೆ. ಕಸದ ಕುಪ್ಪೆ, ಕಸದ ರಾಶಿ ಅದು. ಇಂತಹ ಕಸದ ರಾಶಿಯೊಳಗಿಂದ ಒಂದು ಲತೆ ಮೇಲೆ ಬರುತ್ತದೆ, ಜೀವ ಚಿಮ್ಮುತ್ತದೆ. ಸತ್ತ ವಸ್ತುವಿನ ಮಧ್ಯದಿಂದ ಜೀವ ಚಿಮ್ಮುತ್ತದೆ! ಬೀಜ ಸಾಯುತ್ತದೆ. ಬೀಜದ ಸಾವಿನ ಅಂತರಂಗದಿಂದ ಒಂದು ವಿಶಾಲ ವೃಕ್ಷ ಹೊರಹೊಮ್ಮುತ್ತದೆ. ಇದು ವಿಶ್ವದ ಚಮತ್ಕಾರ. ಜೀವ ವಿಕಾಸ ! ಸಾವಿನಿಂದ ಬದುಕು. ಬದುಕಿನಲ್ಲೆಲ್ಲ ಸಾವು ! ಎರಡೂ ಪೂರಕ, ಪರಸ್ಪರ. ಬದುಕಿಲ್ಲದ ಸಾವಿಗಾಗಲಿ, ಸಾವೇ ಇಲ್ಲದ ಬದುಕಿಗಾಗಲಿ ಈ ವಿಶ್ವ ಸ್ತರದಲ್ಲಿ ಅರ್ಥವಿಲ್ಲ. ಅದನ್ನು ಕಲ್ಪಿಸಲೂ ಆಗದು. ನಾನು ಸಾಯಲಿಲ್ಲ; ನೀವು ಸಾಯಲಿಲ್ಲ; ಯಾರೂ ಸಾಯಲಿಲ್ಲ ಎನ್ನಿ. ಹೂ ಸಾಯಲಿಲ್ಲ. ಹಣ್ಣು ಸಾಯಲಿಲ್ಲ, ಸಸ್ಯ ಸಾಯಲಿಲ್ಲ, ಪ್ರಾಣಿಗಳೂ ಸರಿ. ಯಾವುದೂ ಸಾಯದೆ ಇದ್ದರೆ ಆಹಾರ ಆಗುವುದು ಯಾವುದು? ಬದುಕುವುದು ಯಾವುದರ ಮೇಲೆ? ಒಂದು ಉಂಟಾಗಬೇಕಾದರೆ ಇನ್ನೊಂದು ಹೋಗಬೇಕಾಗುತ್ತದೆ. ಅಜ್ಜ ಹೋಗುತ್ತಾನೆ; ಮೊಮ್ಮಗ ಬರುತ್ತಾನೆ ಮನೆಯೊಳಗೆ. ಅಜ್ಜನ ಹೋಗುವಿಕೆ, ಮಗುವಿನ ಬರುವಿಕೆ ಹೊಂದಿಕೊಂಡಿವೆ.

ಎಲ್ಲಾ ಹಿಂದಿನವರೂ ಹೋಗಿದ್ದಾರೆ ಎಂದೇ ನಮಗಿಲ್ಲಿ ವಾಸಿಸಲು, ಬದುಕಲು ಅವಕಾಶ. ಬಂದವರೆಲ್ಲ ಇದ್ದಿದ್ದರೆ, ನಾವು ಇರುವುದಾದರೂ ಎಲ್ಲಿ? ಹೇಗೆ? ನಿಮ್ಮ ಪುಟ್ಟ ಮನೆಯೊಳಗೆ ನೀವು, ನಿಮ್ಮ ಹೆಂಡತಿ, ನಿಮ್ಮ ಇಬ್ಬರು ಮಕ್ಕಳು, ಚಂದದ ಜೀವನ ! ಹಾಗಾಗದೆ, ತಂದೆ ತಾಯಿಗಳು, ಅಜ್ಜ ಮುತ್ತಜ್ಜರು, ಅಜ್ಜಿ ಮುತ್ತಜ್ಜಿಗಳು ಎಲ್ಲರೂ ಇದ್ದಿದ್ದರೆ? ಸಾವಿನಿಂದ ಜೀವ. ದುಃಖದಿಂದ ಸುಖ ಹೊರಹೊಮ್ಮುತ್ತೆ. ಜಗತ್ತೇ ಅದ್ಭುತ. ಅದು ಸದಾ ರಹಸ್ಯ. ಅದರ ಪರಿಜ್ಞಾನವಿಲ್ಲದುದರಿಂದ ಹಾಗಿರಬೇಕು, ಹೀಗಿರಬೇಕು ಎಂಬ ಕಲ್ಪನೆ ನಮ್ಮದು. ಒಂದು ವೇಳೆ ಈ ರಹಸ್ಯದ ತಿಳಿವಾದರೆ ಎಲ್ಲವೂ ಸರಿ, ಎಲ್ಲವೂ ಅವಶ್ಯ ಎನಿಸುತ್ತದೆ. ಸುಖವೂ ಸರಿ. ದುಃಖವೂ ಸರಿ. ತಲೆನೋವು ಇರದೇ ಇದ್ದರೆ ನಾವು ಬದುಕುತ್ತಿರಲಿಲ್ಲ ! ಹೊಟ್ಟೆ ಕಡಿಯದೇ ಇದ್ದರೆ ನಾವು ಬದುಕುತ್ತಿರಲಿಲ್ಲ. ಹೊಟ್ಟೆ ಕಡಿಯುತ್ತದೆ ಎಂದೇ ಏನೋ ಕೆಟ್ಟಿದೆ ಎಂದು ಗೊತ್ತಾಗುತ್ತದೆ. ದೇಹದ ಸಂಕೇತ ಅದು. ಅದು ದೇಹದ ಭಾಷೆ. ಎಲ್ಲರಿಗೂ ತಿಳಿವ ಭಾಷೆ ಅದು. 'ನಾನು ಸರಿಯಿಲ್ಲ' ಎಂದು ಅದು ಹೇಳುತ್ತದೆ. ಹಾಗೆ ಅದು ಹೇಳದೇ ಇದ್ದಿದ್ದರೆ, ದೇಹದಲ್ಲಿ ಏನಾಗಿದೆ ನಮ್ಮ ಗಮನಕ್ಕೆ ಬರುತ್ತಿರಲಿಲ್ಲ. ಆಗ ಕಷ್ಟ ಪರಂಪರೆಗೆ ಸಿಲುಕಿಕೊಳ್ಳುತ್ತಿದ್ದೆವು. ಬೆಂಕಿಯ ಸುಡುವಿಕೆ, ಹಸಿವಿನ ಬಾಧೆ, ಗಾಯದ ನೋವು ಗೊತ್ತಾಗುವುದರಿಂದಲೇ ಬದುಕು ಸುರಕ್ಷಿತವಾಗಿರಲು ಸಾಧ್ಯವಾಗಿದೆ. ಸೃಷ್ಟಿ ಜಾಣ. ಏನು ಏನು ಬಾಳಿಗೆ ಅವಶ್ಯ ಅದೆಲ್ಲ ರೂಪುಗೊಂಡಿದೆ. ಮೊದಲು ಜಡವಸ್ತು. ಅದರಲ್ಲಿ ನೂರು ನೂರು ವಿಧದ ರಚನೆಗಳು. ಅದರ ಮಧ್ಯದಿಂದ ಜೀವಸ್ಪಂದನ! ಅದು ಕೋಟ್ಯಂತರ ವರುಷ ಬೆಳೆದು ಮಾನವನಾದ ! ವಿಕಾಸ ! ಮಾನವೀಯ ಮತಿಯ ಬೆರಗುಗೊಳಿಸುವ ಚಮತ್ಕಾರ ! ಇದು ದೇಹ ವಿಕಾಸ. ಅದೇ ರೀತಿ ಮನೋವಿಕಾಸ. ಈ ಮನೋವಿಕಾಸ ಪೂರ್ಣಗೊಂಡಾಗ ದೇವದರ್ಶನ ! ಆತ್ಮಾನುಭವ. ಅಸತ್ಯ, ಅಜ್ಞಾನಗಳಿಗೆ ಆಸ್ಪದವಿತ್ತ ಮನಸ್ಸು ಸಾಮಾನ್ಯ. ಅದು ವಿಷಯಗಳ ಆಕರ್ಷಣೆಗೆ ಸುಲಭವಾಗಿ ಬಲಿಯಾಗುತ್ತದೆ. ಅದೇ ಮನಸ್ಸು ತಿಳಿಯಾಗಿ, ಜ್ಞಾನ-ಬೆಳಗಿನಲಿ ಸ್ನಾತವಾದರೆ ಸತ್ಯ ಪ್ರೇಮಗಳು ಅದನ್ನು ಪ್ರವೇಶಿಸುತ್ತವೆ. ಮನದ ಭಾವದಳಗಳು ಬಿಚ್ಚಿಕೊಳ್ಳುತ್ತವೆ. ಅರಳುತ್ತದೆ, ಚಿತ್ತು ! ಆಗ ದೇವ ಭಾನ ! ಭಗವತ್ ದರ್ಶನ ! ಹೀಗೆ ಅರಳಲು ಜನ್ಮ ಜನ್ಮಗಳೇ ಬೇಕೆಂದೇನೂ ನೇಮವಿಲ್ಲ. ಇದೇ ಬದುಕಿನಲ್ಲಿ ಸಾಧ್ಯ. ವಾಲ್ಮೀಕಿ, ನಾಮದೇವ, ಉರಿಲಿಂಗ ಪೆದ್ದಿ ಮುಂತಾದವರು ನಿದರ್ಶನ. ಮೂರನೆಯ ವರ್ಗದ ಬುದಿಮತ್ತೆಯುಳ್ಳ ಗಾಂಧಿ, ಬಾಲತನದಲ್ಲಿ ವ್ಯಸನಗಳ ದಾರಿ ತುಳಿದ ಗಾಂಧಿ, ಕೆಲವೇ ದಶಕಗಳಲ್ಲಿ ಮಹಾತ್ಮರಾಗಿದ್ದರು ! ಅಷ್ಟು ತೀವ್ರ ಮನಸ್ಸು ವಿಕಾಸಗೊಂಡಿತ್ತು. ಸತ್ಯದ ಅಪೂರ್ವ





ಮನಸ್ಸು ವಿಕಾಸಗೊಳ್ಳಲು ತಪ ಮಾಡಬೇಕು. ಕಷ್ಟ ಪಡಬೇಕು; ಕಷ್ಟ ಸಹಿಸಬೇಕು. ಕಷ್ಟಗಳು ಬರುತ್ತವೆ. ಜನರಿಂದ ಆತಂಕಗಳು ಉಂಟಾಗುತ್ತವೆ. ಬೇಡಾದ ಶಬ್ದಗಳು ಕೇಳಿ ಬರುತ್ತವೆ. ಇಷ್ಟೆಲ್ಲದರಲ್ಲಿ ಮನಸ್ಸನ್ನು ತಣ್ಣಗೆ ಇಟ್ಟುಕೊಳ್ಳುವ ಪ್ರಯತ್ನ ಮಾಡುವುದು ತಪಸ್ಸು. ಮನಸ್ಸು ತಪ್ತವಾಗುತ್ತಿದ್ದರೆ ಅದು ತಪಸ್ಸಲ್ಲ. ತಾಪ ಆಗುವ ವಾತಾವರಣದೊಳಗೆ ತಾಪ ಆಗದಂತೆ ಇದ್ದರೆ ಅದೇ ತಪಸ್ಸು. ಬಯ್ಯಬೇಕಾದ, ಹೊಡೆಯಬೇಕಾದ ಪ್ರಸಂಗದಲ್ಲೂ ಬಯ್ಯದಂತೆ, ಹೊಡೆಯದಂತೆ ಇರುವುದಾದರೆ ಅದು ತಪಸ್ಸು. ನಡತೆ, ಮಾತು, ವಿಚಾರ, ಭಾವಗಳಲ್ಲಿ ತಾಳ್ಮೆ, ಸಹನೆ. ಅದು ಪೂರ್ಣ ತಪಸ್ಸು.

ಸಹನಶೀಲತೆ ತಪಸ್ಸಿನ ಒಂದು ರೂಪವಾದರೆ 'ಅಭೀಪ್ಸೆ' ಎನ್ನುವುದು ಅದರ ಇನ್ನೊಂದು ಅತಿ ಮಹತ್ವದ ರೂಪ. ಅದು ಹೃದಯದ ಆದಮ್ಯ ಬಯಕೆ. ಆ ಬಯಕೆ ಹೆಚ್ಚಾದಾಗ ಉಂಟಾಗುವ ಆಂತರಿಕ 'ಕಾವು' ತಪ !

ನೆಪೋಲಿನ್ ಇನ್ನೂ ಬಾಲಕ. ಮಿಲಿಟರಿ ಶಿಕ್ಷಣ ಪಡೆಯುತ್ತಾ ಇದ್ದ. ಆ ದೇಶದ ಸೇನಾಧಿಪತಿ ಬಂದರು. ವಿದ್ಯಾರ್ಥಿಗಳು ಸಾಲಾಗಿ ನಿಂತಿದ್ದಾರೆ. ಪ್ರತಿಯೊಬ್ಬರಿಗೂ 'ಏನು ಆಗಬಯಸುತ್ತೀ' ಎಂದು ಕೇಳುತ್ತ ಹೋದರು. ಆ ಬಾಲಕರು 'ನಾನು ಸೈನಿಕನಾಗಬಯಸುವೆ, ನಾನು ಕ್ಯಾಪ್ಟನ್ ಆಗ ಬಯಸುವೆ, ನಾನು ಜನರಲ್ ಆಗಬಯಸುವೆ' ಎಂದು ಹೇಳುತ್ತಿದ್ದರು. ಈಗ ಉಳಿದವರಿಗಿಂತ ಕುಳ್ಳ ಇದ್ದುದರಿಂದ ಕೊನೆಗೆ ನಿಂತಿದ್ದ. ಬಹಳ ಬಡ ಹುಡುಗ. ಆತನಿಗೂ ಅದೇ ಪ್ರಶ್ನೆ. ನೆಪೋಲಿಯನ್ ಹೇಳಿದ 'ನಾನು ಈ ಯೂರೋಪ್ ಖಂಡದ ಮಹಾದೊರೆಯಾಗಬೇಕು'. ಎಂಥ ಬಯಕೆ ! ಏನು ಅಭೀಪ್ಸೆ! ಆತನ ಅಣು ಅಣು ಮಹಾರಾಜನಾಗ ಬಯಸುತ್ತಿತ್ತು. ಆ ಬಯಕೆ ಆತನ ಆಂತರಿಕ ತಪಸ್ಸು. ಅದಕ್ಕಾಗಿ ಆತ ಸಹಿಸಿದ ಅಪಾರ ಕಷ್ಟಗಳು, ಮಾಡಿದ ಸಾಧನೆ, ಬಾಹ್ಯ ತಪಸ್ಸು. ಅದು ಫಲವಿತ್ತಿತ್ತು. ಜಗತ್ತೇ ಬೆರಗುಗೊಂಡು ನೋಡಿತ್ತು. ಆತ ಕೆಲವೇ ವರುಷಗಳಲ್ಲಿ ಅಜೇಯ ಚಕ್ರಾಧಿಪತಿಯಾದ !

ನಮ್ಮಲ್ಲಿ ಈ ಬಗೆಯ ದ್ವಿವಿಧ ತಪದ ಕೊರತೆ ! ಇಲ್ಲದಿದ್ದರೆ ನಮ್ಮ ದೇಶ ಹೀಗೇಕೆ ಇರುತ್ತಿತ್ತು? ನೂರು ಕೋಟಿಗೆ ಸಮೀಪಿಸಿದ ಜನ, ವಿಶಾಲ ನಾಡು, ನಿಸರ್ಗ ಸಂಪದ, ಸಂಪೂರ್ಣ ಸ್ವಾತಂತ್ರ್ಯ, ಆದರೂ ಬಡತನ, ಕೈಯಾಸೆ, ಅಪ್ರಾಮಾಣಿಕತೆ, ವ್ಯಸನಾಧೀನತೆ, ನೈಚ್ಯಮನೋಭಾವ ! ಇದನ್ನೆಲ್ಲ ತೆಗೆದುಹಾಕಬಲ್ಲೆವು, ಭವ್ಯ ಸಮೃದ ಸತ್ವಪೂರ್ಣ ಭಾರತ ಕಟ್ಟಬಲ್ಲೆವು, ಎಂಬ ಮಾತು ಕೂಡ ನಮಗೆ ಆಡಲು ಧೈರ್ಯವಿಲ್ಲ. ಕಾರ್ಪಣ್ಯದೋಷ ನಮ್ಮೊಳಗೆ. ಇದು ಅಭೀಪ್ಸಾ ತಪದ ಅಭಾವ. ಒಬ್ಬ ಗಾಂಧಿ. ಬಡಕಲು ದೇಹ, ಬರಿಗೈ, ಬರಿ ಮೈ. ಆದರೆ ಅದ್ಭುತ ಸಂಕಲ್ಪ ಶಕ್ತಿ ! ಸತ್ಯಪ್ರೇಮದ ಸಾಮರ್ಥ್ಯ. ಒಳಗೆ ತುಂಬಿ ತುಳುಕುವ ಮಂತ್ರ ಸಾಮರ್ಥ್ಯ. ತಪಶ್ಶಕ್ತಿ ! ಕೋಟಿ ಜನರನ್ನು ಆ ಮಾತು ಪ್ರೇರೇಪಿಸಿತು. ಅದರ ಫಲವಾಗಿ ಬ್ರಿಟಿಷ್ ದೊರೆ ಪಲಾಯನ ! ಅಂಥ ಒಬ್ಬ ತಪಸ್ವಿ ಇಂದಿನ ಭಾರತಕ್ಕೆ ನವಜೀವನ ನೀಡಬಲ್ಲ.

ತಪ ಮೊದಲನೆಯದು. ಸ್ವಾಧ್ಯಾಯ ಎರಡನೆಯದು. ಬಲ್ಲವರ, ಮಹಾಬಲರ, ಸತ್ವಶೀಲರ, ಅನುಭಾವಿಗಳ ಮಾತುಗಳನ್ನು ಆಲಿಸಿ ಅಂತರಂಗ ತುಂಬಿಕೊಳ್ಳುವುದು ಸ್ವಾಧ್ಯಾಯ.

ಮೂರನೆಯದು ಈಶ್ವರ ಪ್ರಣಿಧಾನ. ಪ್ರಚಂಡ ಸಾಹಸ ಮಾಡಿ ಕೊನೆಗೆ ಎಲ್ಲವೂ ಭಗವತ್ ಕಾರುಣ್ಯ ! ನಾನೇನು ಮಾಡಬಲ್ಲೆ? ಅವನ ಸಾಧನ ನಾನು ! ಆತ ಸರ್ವಕರ್ತ. ಕರುಣಾಮಯಿ. ನಮ್ಮೆಲ್ಲ ಮಹಾ ಸಾಧನೆಗಳು ಅವನ ಪ್ರಸಾದ. ಹೀಗೆ ಭಾವ ತಾಳಿದರದು 'ಪ್ರಣಿಧಾನ'!

ಈ ಮೂರು ಕೂಡಿ ಕ್ರಿಯಾಯೋಗ. ಇದರಿಂದ ಮನೋವಿಕಾಸ. ತಪದಿಂದ ಮನಸ್ಸು ಸಬಲವಾಗುತ್ತದೆ. ಸ್ವಾಧ್ಯಾಯದಿಂದ ಪರಿಶುಭ್ರ ಹಾಗೂ ಜ್ಞಾನ ಪೂರ್ಣವಾಗು ತ್ತದೆ. ಈಶ್ವರ ಪ್ರಣಿಧಾನದಿಂದ 'ನಿರಹಂ'ಕಾರಿಯಾಗುತ್ತದೆ. ಭಗವಂತನನ್ನು ಸ್ವೀಕರಿಸುವ ಸಾಮರ್ಥ್ಯ ಬರುತ್ತದೆ. ಇಂಥ ಮನಸ್ಸೇ ವಿಕಸಿತ ಮನಸ್ಸು. ಅರಳಿದ ಮನಸ್ಸು.

ರವೀಂದ್ರನಾಥ ಟಾಗೂರರು ಬಹಳ ದೊಡ್ಡ ಜ್ಞಾನಿ. ಗೀತಾಂಜಲಿಯಂತೂ ಅಮರ ಕೃತಿ. ಅಲ್ಲಿ ಅವರ ಆಧ್ಯಾತ್ಮದ ಬೆಳಕನ್ನು ಕಾಣಬೇಕು. ಎಂಥ ಸುಂದರ ಕಥೆ. ಅಲ್ಲೊಂದು ಮಾತು ಅವರು ಹೇಳುತ್ತಾರೆ. 'ನಾನೀಗ ನಿನ್ನ ಪದತಲದಿ ಕುಳಿತಿದ್ದೇನೆ. ನಿನ್ನಲ್ಲಿ ಒಂದು, ಒಂದೇ ಪ್ರಾರ್ಥನೆ. ನನ್ನ ಬದುಕನ್ನೊಂದು ಕೊಳಲಾಗಿಸು. ನನ್ನ ಹೃದಯವನ್ನು ನಿನ್ನ ಮಧುರ ಕಾವ್ಯಗಾನದಿಂದ ತುಂಬಿ ಬಿಡು ! ನನ್ನ ಸರಲ ಬದುಕಿನಿಂದ ನಿನ್ನ ಅಮರ ಸಂಗೀತ ಹೊರಹೊಮ್ಮಿಸು !' ಕ್ರಿಯಾಯೋಗ ಕವಿ ರವೀಂದ್ರರನ್ನು ಋಷಿಯಾಗಿಸಿದೆ. ಅವರ ಮನಸ್ಸು ಅರಳಿ ಹರವಾಗಿದೆ. ಭಗವಂತನ ಸ್ಪರ್ಶ ಹೊಂದಿದೆ ! ನಮ್ಮ ಬದುಕು ಅದೊಂದು ಕೊಳಲಾಗಬೇಕು. ಕೊಳಲಿನಲ್ಲಿ ಏನೂ ಇಲ್ಲ; ಬರಿದು. ಆ ಕೊಳಲಿನ ಮೂಲಕ, ಮನಸ್ಸಿನ ಮೂಲಕ, ಭಗವಂತ ದಿವ್ಯ ನಿನಾದವನ್ನು ಪ್ರಾರಂಭಮಾಡುತ್ತಾನೆ. ಆ ನಿನಾದಗಳೇ ಚಿಂತನೆಗಳು.

(ಕೃಪೆ : ಭಗವಚ್ಚಿಂತನ)

# ಬಸವಣ್ಣ

– ಲಿಂ. ಡಾ. ಎಚ್. ತಿಪ್ಪೇರುದ್ರ ಸ್ವಾಮಿಗಳು *

**ಶ**ರಣರಲ್ಲಿ ನಾನಾ ಮನೋಧರ್ಮದವರನ್ನು ಕಾಣುತ್ತೇವೆ. ಅವರ ಸಾಧನೆಯ ಮಾರ್ಗದಲ್ಲಿಯೂ ವೈವಿಧ್ಯವಿದೆ. ಆದರೆ ಎಲ್ಲರೂ ಭಕ್ತಿಯನ್ನು ಏಕರೀತಿಯಲ್ಲಿ ಪುರಸ್ಕರಿಸಿರುವುದು ಕಂಡುಬರುತ್ತದೆ. ***"ಭಕ್ತಿ ಶಿವನ ನಡುಗಿಸಿತ್ತು, ನುಡಿಸಿತ್ತು; ಭಕ್ತಿ ಶಿವನ ನುಣಿಸಿ, ಬಡಿಸಿ, ತೊಡಿಸಿತ್ತು. ಭಕ್ತಿ ಶಿವನ ಹಾಡಿಸಿ ಕುಣಿದಾಡಿಸಿತ್ತು. ಭಕ್ತಿಯಿಲ್ಲದೆ ವಿರಕ್ತಿಯಿಲ್ಲ, ಜ್ಞಾನವಿಲ್ಲ; ಇದು ಕಾರಣ ಭಕ್ತಿಯೇ ಮುಕ್ತಿ ಜನನಿ"*** ಎಂಬುದು ಶರಣರ ಮಾತು. ಇಲ್ಲಿ ಭಕ್ತಿಯು ವಿರಕ್ತಿ, ಜ್ಞಾನ, ಧ್ಯಾನ, ಕರ್ಮ ಎಲ್ಲ ಮಾರ್ಗಗಳನ್ನೂ ಸಮನ್ವಯಗೊಳಿಸುವ ವಿಶಾಲವಾದ ಅರ್ಥವ್ಯಾಪ್ತಿಯನ್ನು ಪಡೆಯಿತು. ಇಂತಹ ಭಕ್ತಿಯ ಜೀವಂತ ಪ್ರತಿನಿಧಿಯಾಗಿದ್ದವನು ಬಸವೇಶ್ವರ.

ಬಸವಣ್ಣನವರ ಭಕ್ತಿಸಾಧನೆಯ ಮಹತ್ವವನ್ನು ಶರಣರೆಲ್ಲರೂ ಅರಿತಿದ್ದರು. **'ಭಕ್ತಿಯ ಬೆಳೆಸಿರಿ ಬಸವನಯ್ಯ'** ಎಂದು ಚೆನ್ನಬಸವಣ್ಣನೂ, **'ಭಕ್ತಿರೂಪನು ಬಸವ, ನಿತ್ಯರೂಪನು ಬಸವ, ಮತ್ತಾನಂದಸ್ವರೂಪನು ಬಸವಣ್ಣನು'** ಎಂದು ಸಿದ್ಧರಾಮನೂ **'ಎತ್ತೆತ್ತ ನೋಡಿದರೆ ಅತ್ತತ್ತ ಬಸವನೆಂಬ ಬಳ್ಳಿ, ಎತ್ತೆತ್ತ ನೋಡಿದರೆ ಅತ್ತತ್ತ ಲಿಂಗವೆಂಬ ಗೊಂಚಲು, ಒತ್ತಿ ಹಿಂಡಿದೊಡೆ ಭಕ್ತಿಯೆಂಬ ರಸವಯ್ಯ'** ಎಂದು ಮಡಿವಾಳ ಮಾಚಯ್ಯನೂ, ಹೇಳಿರುವುದೇ ಇದಕ್ಕೆ ಸಾಕ್ಷಿ. ಬಸವನ ಮಾತುಗಳನ್ನು ಎಲ್ಲಿ ಹಿಂಡಿದರೂ ಭಕ್ತಿಯೆಂಬ ರಸ ಸುರಿಯುತ್ತದೆಯಂತೆ! ಕಾಡಸಿದ್ಧೇಶ್ವರ ಎಂಬ ವಚನಕಾರ ಹೇಳುವ : **'ಭಕ್ತನಾದರೆ ಬಾಳೆಯ ಹಣ್ಣಿನಂತಿರಬೇಕು; ಭಕ್ತನಾದರೆ ಬೆಲ್ಲದ ಕುಳ್ಳಿಯಂತಿರಬೇಕು. ಭಕ್ತನಾದರೆ ಮಾವಿನ ಫಲದಂತಿರಬೇಕು'** ಎಂಬ ಮಾತುಗಳು ಬಸವಣ್ಣನವರ ಭಕ್ತಿಯನ್ನೇ ನೋಡಿ ಹೇಳಿದಂತಿವೆ. ಎಲ್ಲಿ ಮುಟ್ಟಿದರೂ ಅದು ಮೃದು; ಎಲ್ಲಿ ಸವಿದರೂ ಅದು ಸಿಹಿ.

ಬಸವಣ್ಣನವರ ವಚನಗಳಲ್ಲಿರುವ ಭಕ್ತಿಯ ಮಿಡಿತ ಎಲ್ಲರ ಹೃದಯಗಳಲ್ಲಿಯೂ ಆ ಚೈತನ್ಯದ ದಿವ್ಯ ಧ್ವನಿ ಮಿಡಿಯುವಂತೆ ಮಾಡುತ್ತದೆ. ಅಂತಹ ಸರಳವಾದ, ನೇರವಾದ ಮತ್ತು ಹೃದಯದಿಂದ ಹೃದಯಕ್ಕೆ ಮುಟ್ಟಬಲ್ಲ ಶಕ್ತಿಯನ್ನು ಆ ವಚನಗಳಲ್ಲಿ ಕಾಣುತ್ತೇವೆ. ಹೃದಯದ ತಳಮಳದಿಂದ ಹಿಡಿದು, ಅನುಭಾವದ ಶಾಂತ ಸ್ಥಿತಿಯವರೆಗೆ ಬಸವಣ್ಣನವರ ಸಾಧನೆಯ ವಿವಿಧ ಮಟ್ಟಗಳೆಲ್ಲಾ ಅವನ ವಚನಗಳಲ್ಲಿ ಯಥಾವತ್ತಾಗಿ ಒಡಮೂಡಿರುವುದರಿಂದ ಸಾಧಕರಿಗೆ ಅದೊಂದು ಭಕ್ತಿಸಾಧನೆಯ ಜೀವಂತ ಕೈಪಿಡಿಯಿದ್ದಂತೆ ಎಂದು ಹೇಳಬಹುದು.

ವಿಚಾರವಂತ ಮಾನವನಿಗೆ ಪ್ರಪಂಚದ ಒಂದೊಂದು ವಸ್ತುವೂ, ಒಂದೊಂದು ಘಟನೆಯೂ, ಒಂದೊಂದು ಸಮಸ್ಯೆಯಾಗಿ ಮುಂದೆ ನಿಂತುಕೊಳ್ಳುತ್ತದೆ. ಈ ಬಾಳಿನ ಸುಖದುಃಖಗಳು, ಏರುಪೇರುಗಳು, ನ್ಯಾಯ ಅನ್ಯಾಯಗಳು, ಘರ್ಷಣೆಗಳು, ಮನುಷ್ಯನ ನಿಸ್ಸಹಾಯಕತೆ, ಇವುಗಳನ್ನು ಕಂಡಾಗ ಅವನ ಮನಸ್ಸು ನಾನಾ ಭಾವನೆಗಳ ತುಮುಲರಂಗವಾಗುತ್ತದೆ. **'ನಾನು ಏತಕ್ಕಾಗಿ ಬಾಳುತ್ತಿದ್ದೇನೆ. ಈ ಬಾಳಿನ ಅರ್ಥವೇನು?'** ಎಂಬ ಮೂಲಪ್ರಶ್ನೆಗಳಿಗೆ ಹೋಗುತ್ತದೆ. ಪೂರ್ಣದೃಷ್ಟಿಯಿಂದ ನೋಡಿದಾಗ ಇವೆಲ್ಲವುಗಳ ಸೂತ್ರವನ್ನು ಹಿಡಿದು ಆಡಿಸುತ್ತಿರುವ ಸೂತ್ರಧಾರಿಯೊಬ್ಬನ ಕೈವಾಡವನ್ನು ಕಂಡುಕೊಳ್ಳುತ್ತಾನೆ. ತನ್ನ ಸರ್ವಸ್ವವನ್ನೂ ತನ್ನನ್ನೂ ಆತನಿಗೆ ಅರ್ಪಿಸಿಕೊಳ್ಳುತ್ತಾನೆ. ನಾನಾ ವಸ್ತುಗಳಲ್ಲಿ ಹರಿದು ಹಂಚಿಹೋಗಿದ್ದ ತನ್ನ **'ಪ್ರೇಮ'**ವನ್ನು ಕೇಂದ್ರೀಕರಿಸಿ ಆ ಶಕ್ತಿಗೆ ಸಮರ್ಪಿಸುತ್ತಾನೆ. ಇದೇ **'ಭಕ್ತಿ'** ಎನಿಸಿಕೊಳ್ಳುತ್ತದೆ. **'ಭಕ್ತಿಯು ಪರಮ ಪ್ರೇಮರೂಪವಾದದ್ದು'** ಎಂದು **'ನಾರದ ಭಕ್ತಿಸೂತ್ರ'** ಹೇಳುತ್ತದೆ. **'ಭಕ್ತಿಯೆಂಬ ನಿಧಾನವ ಸಾಧಿಸುವೊಡೆ ಶಿವ ಪ್ರೇಮವೆಂಬ ಅಂಜನವ ನೆಚ್ಚಿಕೊಂಬುದು'** ಎಂದು ಬಸವಣ್ಣನವರು ಹೇಳುತ್ತಾರೆ.

ಹೀಗೆ ನಮಗೆ ಕಾಣದ ಒಂದು ಶಕ್ತಿಯ ಮೇಲೆ ಪರಮ ಪ್ರೇಮವನ್ನು ಇಡಬೇಕಾದರೆ ನಮಗೆ ಕಾಣುವ

* ಖ್ಯಾತ ವಿದ್ವಾಂಸರು, ಮೈಸೂರು





ಈ ಪ್ರಪಂಚದಲ್ಲಿ ಒಂದು ಅತೃಪ್ತಿ ತಲೆದೋರಬೇಕಾಗುತ್ತದೆ. ಆದುದರಿಂದ ಭಕ್ತಿಯ ಮೊದಲನೆಯ ಮೆಟ್ಟಿಲು, ಈ ಬಾಹ್ಯಪ್ರಪಂಚದಲ್ಲಿ, ಈ ಲೌಕಿಕ ಸುಖಗಳ ವಿಚಾರದಲ್ಲಿ ಜಿಜ್ಞಾಸೆ; ಒಂದು ದೈವಿಕವಾದ ಅತೃಪ್ತಿ. ಈ ಸಂಸಾರದಿಂದ ಕ್ಷಣ ಕಾಲ ದೂರ ನಿಂತು ಇದರ ನಶ್ವರತೆಯನ್ನೂ, ಹೇಯಸ್ವರೂಪವನ್ನೂ ಕಂಡುಕೊಳ್ಳುವುದು. ಇದನ್ನೇ ವೀರಶೈವರಲ್ಲಿ **'ಸಂಸಾರ ಹೇಯಸ್ಥಲ'** ಎಂದು ಕರೆದಿದ್ದಾರೆ. ಬಸವಣ್ಣನವರ ಮನಸ್ಸಿನಲ್ಲಿ ಮೊಟ್ಟಮೊದಲು ಉಂಟಾದ ದೈವಿಕವಾದ ತಳಮಳವನ್ನೂ, ಆಂದೋಳನವನ್ನೂ ಅವರ ವಚನಗಳಲ್ಲಿ ಸ್ಪಷ್ಟವಾಗಿ ಕಂಡುಕೊಳ್ಳುತ್ತೇವೆ.

***ಸಂಸಾರವೆಂಬ ಬಲೆಯಲ್ಲಿ ಸಿಲುಕಿದೆನಯ್ಯಾ;***
***ಎನ್ನಯ್ಯಾ ಕಾಯಯ್ಯ, ಕಾಯಯ್ಯಾ;***
***ಹುರುಳಿಲ್ಲ, ಹುರುಳಿಲ್ಲ,***
***ಕೂಡಲಸಂಗಮದೇವಾ, ಶಿವಧೋ ಶಿವಧೋ***

ಎಂದು ಬೇಡಿಕೊಳ್ಳುತ್ತಾರೆ. ಸಂಸಾರವೆಂಬ ರಾಹು ನನ್ನನ್ನು ನುಂಗುತ್ತಿದೆ. ಈ ಗ್ರಹಣಕ್ಕೆ ಇನ್ನೆಂದಿಗೆ ಮೋಕ್ಷ? ಕಪ್ಪೆಯು ಸರ್ಪನ ನೆರಳಿನಲ್ಲಿರುವಂತೆ ನನ್ನ ಸ್ಥಿತಿಯಾಗಿದೆ. ಇಂದಿಗೆಂತು, ನಾಳೆಗೆಂತು ಎಂದು ಬೆಂದ ಒಡಲನ್ನು ಹೊರೆಯುವುದರಲ್ಲಿಯೇ ಕಾಲ ಕಳೆದುಹೋಗುತ್ತಿದೆ. ಸಂಸಾರವೆಂಬ ಸರ್ಪ ಬಂದು ಪಂಚೇಂದ್ರಿಯ ವಿಷಯವೆಂಬ ವಿಷದಿಂದ ನನ್ನನ್ನು ಕಚ್ಚಿದೆ. ಇಂತಹ ಸಂಸಾರದ ದಂದುಗ ಹಿಂಗುವುದೆಂದು? ನನ್ನ ಮನಸ್ಸೇ ನನ್ನ ಮಾತನ್ನು ಕೇಳುವುದಿಲ್ಲ. ಒಂದು ಕಡೆ ಇದು ನಿಲ್ಲದು. ಕೊಂಬೆಯ ಮೇಲಣ ಮರ್ಕಟದಂತೆ ಲಂಘಿಸುತ್ತಿದೆ. ಕಂಬಳಿಯಲ್ಲಿ ಕಣಕವನ್ನು ನಾದಿದಂತೆ ಸಂಸಾರಕ್ಕೆ ಅಂಟಿಕೊಂಡಿದೆ.

***ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯಾ!***
***ವಿಚಾರಿಸಿದೊಡೇನೂ ಹುರುಳಿಲ್ಲವಯ್ಯಾ.***
***ಪ್ರಪಂಚಿನ ದಂಬಿನಲ್ಲಿ ಎನ್ನನೊಂದು***
***ರೂಹುಮಾಡಿ***
***ನೀವಿರಿಸಿದಿರಿ ಕೂಡಲಸಂಗಮದೇವಾ.***

ಅಲ್ಪ ಸುಖಕ್ಕೋಸ್ಕರವಾಗಿ ಬಾಯಿಬಿಟ್ಟು ಅಪಾರವಾದ ದುಃಖಕ್ಕೆ ಒಳಗಾಗುತ್ತಿದ್ದೇನೆ. ಹೇಗೆಂದರೆ :

***ತುಪ್ಪದ ಸವಿಗೆ ಆಲಗ ನೆಕ್ಕುವ ಸೊಣಗನಂತೆನ್ನ***
***ಬಾಳುವೆ;***
***ಸಂಸಾರ ದುಂದುಗವ ಬಿಡದು ನೋಡೆನ್ನ ಮನವು.***
***ಈ ನಾಯಿತನವ ಮಾಣಿಸು***
***ಕೂಡಲಸಂಗಮದೇವಾ, ನಿಮ್ಮ ಧರ್ಮ.***

ಈ ಮನಸ್ಸನ್ನು ನಿಮ್ಮ ಚರಣಕಮಲದಲ್ಲಿ ಭ್ರಮರನಾಗಿರುಸು. ಕಾಯವಿಕಾರ, ಮನೋವಿಕಾರ, ಇಂದ್ರಿಯ ವಿಕಾರಗಳು ಕಾಡುತ್ತಿವೆ. ಕೆಸರಿನಲ್ಲಿ ಬಿದ್ದ ಪಶುವಿನಂತಾಗಿದ್ದೇನೆ.

***ಅಯ್ಯಾ ಅಯ್ಯಾ ಎಂದು ಕರೆಯುತ್ತಲಿದ್ದೇನೆ;***
***ಅಯ್ಯಾ ಅಯ್ಯಾ ಎಂದೊರಲುತ್ತಲಿದ್ದೇನೆ;***
***ಓ ಎನ್ನಲಾಗದೇ ಅಯ್ಯಾ;***
***ಆಗಲೂ ನಿಮ್ಮ ಕರೆಯುತ್ತಲಿದ್ದೇನೆ***
***ಮೌನವೇ ಕೂಡಲಸಂಗಮದೇವಾ.***
***ಅಕಟಕಟ ಶಿವ, ನಿನಗಿನಿತು ಕರುಣವಿಲ್ಲ.***
***ಅಕಟಕಟ ಶಿವ, ನಿನಗಿನಿತು ಕೃಪೆಯಿಲ್ಲ.***
***ಏಕೆ ಹುಟ್ಟಿಸಿದೆ ಇಹಲೋಕ ದುಃಖಿಯ ಪರಲೋಕ ದೂರನ?***
***ಏಕೆ ಹುಟ್ಟಿಸಿದೆ? ಕೂಡಲಸಂಗಮದೇವಯ್ಯ ಕೇಳಯ್ಯ.***
***ಎನಗಾಗಿ ಮತ್ತೊಂದು ತರುಮರನಿಲ್ಲವೇ?***

ನನಗಿಂತ ತರುಮರಾದಿಗಳಾದರೂ ಮೇಲಲ್ಲವೇ? ಅವುಗಳಿಂದ ನೆರಳಾದರೂ ಲಭಿಸುತ್ತದೆ. ಅವುಗಳಿಗಿಂತ ಕೀಳಾಗಿರುವ ನನ್ನನ್ನು ಏಕೆ ಹುಟ್ಟಿಸಿದ್ದೀಯೆ? – ಎನ್ನುತ್ತಾರೆ. ಸಾಧನೆಯ ಪ್ರಾರಂಭದಲ್ಲಿ ಸಾಧಕನ ಮನಸ್ಸಿನಲ್ಲಿ ತಲೆದೋರುವ ತಳಮಳದ ಅದ್ಭುತ ಚಿತ್ರ ಇಲ್ಲಿದೆ. ಇದು ಸಾಧಕನ ಮೊದಲನೆಯ ಸ್ಥಿತಿ ಅಷ್ಟೆ. ಇದೇ ಬಸವಣ್ಣನವರೇ ಮುಂದೆ **"ಮರ್ತ್ಯಲೋಕ ವೆಂಬುದು ಕರ್ತಾರನ ಕಮ್ಮಟವಯ್ಯಾ, ಇಲ್ಲಿ ಸಲ್ಲುವರು ಅಲ್ಲಿಯೂ ಸಲ್ಲುವರು"** ಎಂದು ಹೇಳುವ ಸ್ಥಿತಿಗೆ ಬರುತ್ತಾರೆ. ಆದರೆ ಪ್ರಾರಂಭದಲ್ಲಿ ಈ ಒಂದು ಬಗೆಯ ಅತೃಪ್ತಿ, ನಿರಾಶೆ, ತಲೆದೋರುವುದು ಸಾಧಕನ ಜೀವನದಲ್ಲಿ ಅನಿವಾರ್ಯ ಎಂದು ಕಾಣುತ್ತದೆ. **'ಮಿಸ್ಟಿಸಿಸಮ್'** ಅನ್ನು ಕುರಿತು ಬರೆಯುವಾಗ ಡೀನ್ ಇಂಗ್ ಮೊದಲಾದ ಲೇಖಕರು ಹೇಳುವ "Dark night of the soul" ಎಂಬ ಮಾತನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು.೧ ಸಾಧಕನ ಜೀವನದಲ್ಲಿ **'ಇದೊಂದು ಕತ್ತಲೆಯ ರಾತ್ರಿ'** ಇದ್ದಂತೆ. ಈ ರಾತ್ರಿ ಕಳೆದಮೇಲೆ ಶಾಂತಿಯ ಹೊಂಬೆಳಗು ಕಾಣಿಸುವುದು. ಈ ಕತ್ತಲೆಯ ರಾತ್ರಿಯ ತಳಮಳವನ್ನು ಪಡೆಯದೇ

ಇರುವ ಸಾಧಕ ನಿಜವಾದ ಸಾಧಕನೇ ಅಲ್ಲ; ಅವನು ತನ್ನ ಗುರಿಯನ್ನು ಮುಟ್ಟುವುದು ಸಾಧ್ಯವೂ ಇಲ್ಲ – ಎನ್ನುವಷ್ಟರಮಟ್ಟಿಗೆ 'ಇಂಗ್ ಹೋಗುತ್ತಾನೆ.ಗಿ ಅಂತು ಬಾಹ್ಯಪ್ರಪಂಚವನ್ನು ಕುರಿತು ಒಂದು ಬಗೆಯ ಅತೃಪ್ತಿ, ತಳಮಳ, ಸಾಧಕನ ಪ್ರಗತಿಪಥದಲ್ಲಿ ತಲೆದೋರುವುದು ಅನಿವಾರ್ಯವೆಂದು ಹೇಳಬಹುದು. ಆದರೆ ಇದು ನಿರಾಶೆಯಲ್ಲಿ ಕೊನೆಗೊಳ್ಳದು. ಅಂತರಂಗದ ತಳಮಳದ ಮಥನದಿಂದ ಒಂದು ಕಿಡಿ ಹುಟ್ಟಿ ಮುಂದಿನ ಸಾಧನೆಯ ಮಾರ್ಗದ ಮೇಲೆ ಬೆಳಕನ್ನು ಬೀರುತ್ತದೆ. ಅದನ್ನು ಬಸವಣ್ಣನವರ ಜೀವನದಲ್ಲಿಯೂ ಕಾಣುತ್ತೇವೆ.

**"ಏಕೆ ಹುಟ್ಟಿಸಿದೆ ಇಹಲೋಕದ ದುಃಖಿಯ ಪರಲೋಕ ದೂರನ?"** – ಎಂದು ಸಂಕಟಗೊಳ್ಳುತ್ತಿದ್ದ ಬಸವಣ್ಣನವರು ಜೀವನದ ಗುರಿಯೇನೆಂಬುದನ್ನೂ, ಅದನ್ನು ಸಾಧಿಸುವ ಮಾರ್ಗವನ್ನೂ, ಗುರುಕರುಣೆಯಿಂದ ಕಂಡುಕೊಂಡರು. ತಮ್ಮ ಸರ್ವಸ್ವವನ್ನೂ ಕೂಡಲಸಂಗನಿಗೆ ಒಪ್ಪಿಸಿ ಅನನ್ಯ ಪ್ರೇಮದಿಂದ ಅವನ ಮರೆಹೊಕ್ಕರು.

*ತಂದೆ ನೀನು, ತಾಯಿ ನೀನು,*
*ಬಂಧು ನೀನು, ಬಳಗ ನೀನು,*
*ನೀನಲ್ಲದೆ ಮತ್ತಾರೂ ಇಲ್ಲವಯ್ಯ*
*ಕೂಡಲಸಂಗಮದೇವಾ, ಹಾಲಲದ್ದು,*
*ನೀರಲದ್ದು*

ಎಂದು ಸಂಪೂರ್ಣವಾಗಿ ಶರಣಾಗತರಾದರು. ಈ ಪೂರ್ಣ ಶರಣಾಗತಿ, ಭಕ್ತಿಪಥದಲ್ಲಿ ಮೊದಲನೆಯ ಹೆಜ್ಜೆ. ಇದನ್ನೇ ವೈಷ್ಣವ ಭಕ್ತಿಮಾರ್ಗದಲ್ಲಿ, **'ಪ್ರವೃತ್ತಿ'** ಎಂದು ಕರೆಯುತ್ತಾರೆ. ಇಲ್ಲಿ ಭಕ್ತನಿಗೆ ತನ್ನದೆನ್ನುವುದೇನೂ ಉಳಿಯುವುದಿಲ್ಲ.

*ಎನ್ನ ವಾಮಕ್ಷೇಮ ನಿಮ್ಮದಯ್ಯಾ,*
*ಎನ್ನ ಹಾನಿವೃದ್ಧಿ ನಿಮ್ಮದಯ್ಯ.*
*ಎನ್ನ ಮಾನಾಪಮಾನ ನಿಮ್ಮದಯ್ಯಾ,*
*ಬಳ್ಳಿಗೆ ಕಾಯಿ ದಿಮ್ಮಿತ್ತೇ*
*ಕೂಡಲಸಂಗಮದೇವಾ.*

ಬಳ್ಳಿಗೆ ಕಾಯಿ ಭಾರವಾಗುತ್ತದೆಯೇ. ನನಗೆ ಸ್ವತಂತ್ರ ಅಸ್ತಿತ್ವವಿಲ್ಲ. ನಿಮ್ಮ ಕರುಣೆಯ ಕಂದನಾಗಿದ್ದೇನೆ. ನರವಿಂಧ್ಯದೊಳಗೆ ನನ್ನನ್ನು ಒಂದು ಗಿಳಿಯನ್ನಾಗಿ ಮಾಡಿ 'ಶಿವ ಶಿವ' ಎಂದು ಓದಿಸುತ್ತಾ, ಭಕ್ತಿಪಂಜರದೊಳಗಿಟ್ಟು ರಕ್ಷಿಸು. ನೀನು ಸರ್ವಶಕ್ತ. ನೀನೊಲಿದರೆ ಕೊರಡು ಕೊನರುವುದು; ನೀನೊಲಿದರೆ ಬರಡು ಹಯನಹುದು; ವಿಷವೂ ಅಮೃತವಹುದು. ನನ್ನಲ್ಲಿ ಅವಗುಣವನ್ನು ಹುಡುಕಬೇಡ. ಭವರೋಗವೈದ್ಯ ನೀನು; ನನ್ನನ್ನು ಭವರೋಗಮುಕ್ತನನ್ನಾಗಿ ಮಾಡು. ಆಶೆಯೆಂಬ ಪಾಶದಿಂದ ಬಂಧಿತನಾಗಿದ್ದೇನೆ. ಈ ಬಂಧನವನ್ನು ಮಾಣಿಸು–ಎಂದು ಕೂಡಲಸಂಗನ ಕೃಪೆಯೊಂದನ್ನೇ ನಂಬಿ ಹಾರೈಸಿ ಆತನ ಮರೆಹೋಗುತ್ತಾರೆ. ಇಲ್ಲಿ ಸರ್ವವ್ಯಾಪಿಯಾದ ವಿಶ್ವಶಕ್ತಿಯನ್ನು ಕುರಿತು ಶ್ರದ್ಧೆಯುಂಟಾಗಿದ್ದರೂ ಮನಸ್ಸಿನ ತಳಮಳವಿನ್ನೂ ಹಿಂಗಿಲ್ಲ.

ಮನಸ್ಸಿನ ತಳಮಳ ಹಿಂಗುವ ಮಾರ್ಗದಲ್ಲಿ ಮುಂದುರಿಯಬೇಕಾದರೆ ಈ ತಳಮಳಕ್ಕೆ ಕಾರಣವಾದ ವಸ್ತುಗಳೆಲ್ಲಾ ಆ ವಿಶ್ವಾತ್ಮನ ಕೈವಾಡವನ್ನು ಕಾಣುವ ದೃಷ್ಟಿ ಬೇಕು. ಅದಕ್ಕೆ ತನ್ನ **'ಅಹಂ'** ಅಳಿದು, ಆ ವಿಶ್ವಶಕ್ತಿ ತನ್ನ ಚೈತನ್ಯವನ್ನು ವ್ಯಾಪಿಸುವಂತೆ ತನ್ನನ್ನು ವಿಕಾಸಗೊಳಿಸಿಕೊಳ್ಳಬೇಕು. **'ನಾನು'** ಎಂಬುದು ತೆಳ್ಳಗಾಗದೆ ಹೊರತು, ಎಲ್ಲೆಡೆಗೂ ಹರಡಿದ ದೈವಕೃಪೆ ನಮ್ಮ ಅಹಂಕಾರವನ್ನು ದಾಟಿಕೊಂಡು ಒಳಕ್ಕೆ ಬರಲಾರದು, ಸಂಕುಚಿತವಾದ **'ನಾನು'** ಅಳಿದಂತೆಲ್ಲಾ, ವಿಶ್ವವ್ಯಾಪಕವಾದ **'ನಾನು'** ಬೆಳೆಯುತ್ತಾ ಹೋಗುತ್ತದೆ. ಆದುದರಿಂದ ಅಹಂಕಾರವನ್ನು ನಾಶಗೊಳಿಸುವುದು ಸಾಧಕನ ಬಹಳ ಮುಖ್ಯವಾದ ಹೆಜ್ಜೆ. ಅದು ಬಹಳ ಕಷ್ಟಕರವಾದುದೂ ಹೌದು. ಹೆಜ್ಜೆ ಹೆಜ್ಜೆಗೂ **'ನಾನು' 'ನನ್ನನ್ನು' 'ನನ್ನಿಂದ'** ಎಂಬ ಅಹಂಕಾರದ ಗೋಡೆಗಳನ್ನು, ಮನುಷ್ಯ ಕಟ್ಟಿಕೊಳ್ಳುತ್ತಾನೆ. **'ನನ್ನ ಸಂಪತ್ತು', 'ನನ್ನ ಅಧಿಕಾರ', 'ನನ್ನ ರೂಪ'** ಎಂಬ ನೂರಾರು ಅಹಂಕಾರದ ಬಂಧನಗಳು ಅವನನ್ನು ಸಂಕುಚಿತಗೊಳಿಸುತ್ತದೆ. "Our possessions are our limitations" ಎಂದು ಟ್ಯಾಗೋರರು ಹೇಳುವ ಹಾಗೆ ಲೌಕಿಕ ಸಂಪತ್ತಿನ ಗಳಿಕೆ ನಮ್ಮ ಮಿತಿಯನ್ನು ತೋರಿಸುತ್ತದೆ. ತ್ಯಾಗ ನಮ್ಮ ವಿಕಾಸಕ್ಕೆ ಕಾರಣವಾಗುತ್ತದೆ. ಏಸುಕ್ರಿಸ್ತನು ಹೇಳಿದ "It is easier for a camel to pass through thr eye of a needle than for a rich man to enter the kingdom of heaven" ಎಂಬ ಮಾತು ಈ ಅರ್ಥದಲ್ಲಿಯೇ ಹೇಳಿದುದು. ಅಹಂಕಾರಕ್ಕೆ ಐಶ್ವರ್ಯ ಕಾರಣವಾಗುವಂತೆಯೇ ಯೌವನ, ರೂಪ, ಕುಲ ಕೊನೆಗೆ ವಿನಯವನ್ನು ಕೊಡಬೇಕಾದ ವಿದ್ಯೆ,





ಇವೆಲ್ಲಾ ಕಾರಣಗಳಾಗುತ್ತವೆ. ಅದು ಎಲ್ಲೆಲ್ಲಿ ಯಾವ ಯಾವ ರೂಪದಿಂದ ಹೆಡೆಯೆತ್ತಿದ್ದರೂ ಅದನ್ನು ಅಲ್ಲಲ್ಲಿಯೇ ಹತ್ತಿ ತುಳಿದು ಕತ್ತರಿಸುವ ಎಚ್ಚರಿಕೆ ಸಾಧಕನಿಗೆ ಅತ್ಯಗತ್ಯ.

ಇದನ್ನು ಬಸವಣ್ಣನವರ ಜೀವನದಲ್ಲಿ ಹೆಜ್ಜೆ ಹೆಜ್ಜೆಗೂ ಕಾಣುತ್ತೇವೆ. ಲೌಕಿಕ ಸಂಪತ್ತು ಪದವಿಗಳಲ್ಲಿ ನೋಡಿದರೆ ಒಂದು ರಾಜ್ಯದ ಮುಖ್ಯಮಂತ್ರಿ. ಹಾಗೆಯೇ ರೂಪ, ಕುಲ, ವಿದ್ಯೆ ಎಲ್ಲಾ ದೃಷ್ಟಿಗಳಿಂದಲೂ ಅಹಂಕಾರ ಬೆಳೆಯುವುದಕ್ಕೆ ಅನುಕೂಲವಾದ ಸನ್ನಿವೇಶಗಳೆಲ್ಲಾ ಬಸವಣ್ಣನವರಿಗೆ ಇದ್ದವು. ಆದರೂ ಬಸವಣ್ಣನವರು ಅದರ ತಲೆಯನ್ನು ಮೆಟ್ಟಿ ಮೇಲೇರಿದರು.

*ಮಾವಿನಕಾಯೊಳಗೊಂದು ಎಕ್ಕೆಯ ಕಾಯಿ*
*ನಾನಯ್ಯಾ ;*
*ಅನು ಭಕ್ತನೆಂತೆಂಬೆ ನಿಮ್ಮ ಶರಣರ ಮುಂದೆ*
*ನಾಚಿಕೆಯಿಲ್ಲದೆ ;*
*ಕೂಡಲಸಂಗನ ಶರಣರ ಮುಂದೆ ನಾನೆಂತು*
*ಭಕ್ತನಪ್ಪೆನಯ್ಯಾ*

ತಮ್ಮನ್ನು ಹೊಗಳಿದವರ ಮುಂದೆ ಹೀಗೆ ಸಂಕೋಚವನ್ನು ವ್ಯಕ್ತಪಡಿಸಿದರು. ತಮ್ಮ ಭಕ್ತಿಯೆಲ್ಲಾ ಶಿವಶರಣರಿಂದ ಬಂದುದೆಂಬುದನ್ನು ಬಹಳ ಸುಂದರವಾಗಿ ಹೀಗೆ ಹೇಳಿದ್ದಾರೆ :

*ಭಕ್ತಿಯಿಲ್ಲದ ಬಡವ ನಾನಯ್ಯಾ ;*
*ಕಕ್ಕಯ್ಯನ ಮನೆಯಲು ಬೇಡಿದೆ.*
*ಚನ್ನಯ್ಯನ ಮನೆಯಲು ಬೇಡಿದೆ.*
*ದಾಸಯ್ಯನ ಮನೆಯಲು ಬೇಡಿದೆ.*
*ಎಲ್ಲ ಪುರಾತನರು ನೆರೆದು ಭಕ್ತಿ ಭಿಕ್ಷವನಿಕ್ಕಿದರೆ,*
*ಎನ್ನ ಪಾತ್ರೆ ತುಂಬಿತ್ತು ಕೂಡಲಸಂಗಮದೇವಾ.*

ಶರಣರೆಲ್ಲರ ಕೃಪೆಯಿಂದ ಭಕ್ತಿಯ ಭಿಕ್ಷಾಪಾತ್ರೆ ತುಂಬಿದೆ ಎಂದು ಹೇಳುತ್ತಾರೆ ಈ ಭಕ್ತಿ ನಿಧಿ ಬಸವಣ್ಣನವರು. ಅದು ಕೇವಲ ಔಪಚಾರಿಕವಾದ ತೋರಿಕೆಯ ವಿನಯವಲ್ಲ. ***"ಎನಗಿಂತ ಕಿರಿಯರಿಲ್ಲ. ಶಿವಭಕ್ತರಿಗಿಂತ ಹಿರಿಯರಿಲ್ಲ; ನಿಮ್ಮ ಪಾದಸಾಕ್ಷಿ, ಎನ್ನ ಮನಸಾಕ್ಷಿ"*** – ಎಂದು ಹೃದಯದ ಅಂತರಾಳದಿಂದ ಹುಟ್ಟಿದುದು.

ಎಲ್ಲ ಮದಗಳಿಗಿಂತಲೂ ಕುಲಮದವನ್ನು ಅಳಿಯುವುದು ಬಹಳ ಕಷ್ಟ. ಅದರಲ್ಲಿಯೂ ಜಾತಿಯಿಂದಲೇ ಯೋಗ್ಯತೆಯ ನಿರ್ಣಯವಾಗುತ್ತಿದ್ದ ಬಸವಣ್ಣನವರ ಕಾಲದಲ್ಲಿಯಂತೂ ಅದು ಬಹುಮಟ್ಟಿಗೆ ಅಸಾಧ್ಯವಾದುದಾಗಿತ್ತು. ಹುಟ್ಟಿನಿಂದಲೇ ಜಾತಿಯನ್ನು ಮತ್ತು ಜಾತಿಯಿಂದಲೇ ಯೋಗ್ಯತೆಯನ್ನು ನಿರ್ಣಯಿಸುವ ಅಂಧಶ್ರದ್ಧೆಯ ವಿರುದ್ಧ ದೊಡ್ಡ ಕ್ರಾಂತಿಯನ್ನೇ ಎಬ್ಬಿಸಿ ಧರ್ಮದ ನಿಜಸ್ವರೂಪವನ್ನು ಸಾರಿದ ಬಸವೇಶ್ವರ ತಾನು ಕುಲಧರ್ಮವನ್ನು ಮೊಟ್ಟಮೊದಲು ಕಿತ್ತೊಗೆದ.

*ಉತ್ತಮ ಕುಲದಲ್ಲಿ ಹುಟ್ಟಿದೆನೆಂಬ*
*ಕಷ್ಟತನದ ಹೊರೆಯ ಹೊರಿಸದಿರಯ್ಯಾ ;*
*ಕಕ್ಕಯ್ಯನೊಕ್ಕುದನಿಕ್ಕ ನೋಡಯ್ಯ,*
*ದಾಸಯ್ಯ ಶಿವದಾನವನೆರೆಯ ನೋಡಯ್ಯ.*
*ಮನ್ನಣೆಯ ಚನ್ನಯ್ಯನೆನ್ನುವ ಮನ್ನಿಸ,*
*ಉನ್ನತ ಮಹಿಮಾ ಕೂಡಲಸಂಗಮದೇವಾ*
*ಶಿವಧೋ ಶಿವಧೋ*

ಎಂದು ಹೇಳುವಲ್ಲಿ ಚನ್ನಯ್ಯ, ದಾಸಯ್ಯ, ಕಕ್ಕಯ್ಯ ಇವರೆಲ್ಲರಿಗಿಂತಲೂ ನಾನು ಕೀಳು, ಅವರ ದಯೆಯಿಂದ ಉದ್ಧಾರವಾಗಬೇಕು ಎಂದು ತಮ್ಮ ವಿನಯವನ್ನು ತೋರಿಸುತ್ತಾರೆ. ಅದು ಪರಿಪಾಕಗೊಳ್ಳುತ್ತಿರುವ ಅವರ ಹೃದಯದ ಸಂಸ್ಕಾರವನ್ನು ಪ್ರಕಟಪಡಿಸುತ್ತದೆ. ***'ಮಾಡಿದೆನೆಂಬುದು ಮನದಲ್ಲಿ ಬಂದರೆ ಏಡಿಸಿ ಕಾಡಿತ್ತು ಶಿವನ ಡಂಗುರ'*** ಎಂಬುದನ್ನೂ ***'ಹಮ್ಮಿನ ಭಕ್ತಿ ಕರ್ಮಕ್ಕೆ ಮೊದಲು'*** ಎಂಬುದನ್ನೂ ಅವರು ಬಲ್ಲರು. ಹೀಗೆ ಅರಳಿ ಮಗಮಗಿಸುತ್ತಿರುವ ಪುಷ್ಪ ತಾನೆಷ್ಟೇ ವಿನಯದಿಂದ ಎಲೆಯ ಹಿಂದಿರಲು ಬಯಸಿದರೂ ಅದರ ಪರಿಮಳವನ್ನು ಗಾಳಿ ನಾನಾ ದಿಕ್ಕಿಗೆ ಬೀರಿತು. ಅದು ನೂರಾರು ಜನರನ್ನು ಆಕರ್ಷಿಸಿತು. ಅವರೆಲ್ಲರ ಹೊಗಳಿಕೆಯಿಂದಲೂ ಬಸವಣ್ಣನವರ ತಲೆ ತಿರುಗಲಿಲ್ಲ, ತಿರುಗಬಹುದಾಗಿತ್ತು. ಸ್ವಲ್ಪಮಟ್ಟಿಗೆ ಆ ಲಕ್ಷಣಗಳೂ ಅವರ ಮನಸ್ಸಿನಲ್ಲಿ ತೋರಿರಬೇಕು. ಆದರೆ ಸದಾ ಜಾಗ್ರತವಾಗಿದ್ದ ಅವರ ಹೃದಯ ಅದು ಬೇರುಬಿಡಲು ಅವಕಾಶ ಕೊಡದೆ –

*ಎನ್ನವರೊಲಿದು ಹೊನ್ನ ಶೂಲದಲಿಕ್ಕಿದರೆನ್ನ*
*ಹೊಗಳಿ ಹೊಗಳಿ ;*
*ಎನ್ನ ಹೊಗಳತೆ ಎನ್ನ ನಿಮ್ಮೆಯ್ಗೊಂಡಿತ್ತಲ್ಲಾ;*
*ಅಯ್ಯಾ ನಿಮ್ಮ ಮನ್ನಣೆಯೇ ಮಸೆದಲಗಾಗಿ*
*ತಾಗಿತ್ತಲ್ಲಾ !*
*ಅಯ್ಯೋ ನೊಂದೆನು ಸೈರಿಸಲಾರೆನು.*

*ಕೂಡಲಸಂಗಮದೇವಾ ನೀನೆನಗೊಳ್ಳಿದನಾದರೆ*
*ಎನ್ನ ಹೊಗಳಿಕೆಗಡ್ಡ ಬಾರಾ ಧರ್ಮಿ*

ಎಂದು ಅಂತರಂಗದಲ್ಲಿಯೇ ಬೇಡುತ್ತಿದ್ದುದನ್ನು ಮತ್ತು ಆ ಅಹಂಕಾರದ ಸುಳಿಯನ್ನು ಅಮೂಲಾಗ್ರವಾಗಿ ಕಿತ್ತೆಸೆದುದನ್ನು ಕಾಣುತ್ತೇವೆ.

ಹೀಗೆ ಅಹಂಕಾರವನ್ನು ಅಳಿದು, ವಿನಯದಿಂದ ವಿಕಾಸವಾಗುತ್ತಿರುವ ಸಾಧಕನಿಗೆ, ಮಾರ್ಗದಲ್ಲಿ ಅನೇಕ ಎಡರುತೊಡರುಗಳೂ, ಅಡ್ಡಿ ಆತಂಕಗಳೂ ಬರಬಹುದು; ಬರುತ್ತವೆ; ಬರಬೇಕು. ಅವುಗಳಿಂದ ಅವನ ನಿರ್ಧಾರ ಸಡಿಲವಾಗಬಾರದು. ಸಾಧಕನಿಗೆ ದೃಢ ನಿರ್ಧಾರ, ಏಕೈಕನಿಷ್ಠೆ, ಅಚಲಶ್ರದ್ಧೆ, ಅತ್ಯಗತ್ಯ. ತನಗೊದಗಿದ ಅಡ್ಡಿ ಆತಂಕಗಳಿಂದ ಕುಗ್ಗದೆ, ಅವುಗಳು ತನ್ನನ್ನು ವಿಕಾಸಮಾರ್ಗದಲ್ಲಿ ಕೊಂಡೊಯ್ಯಲು ಬಂದ ಸಂಗಾತಿಗಳೆಂದು ಸಾಧಕ ತಿಳಿಯಬೇಕು. ಬಸವಣ್ಣ ಹೇಳುವಂತೆ **'ಉರಿಬರಲಿ, ಸಿರಿಬರಲಿ ಬೇಕು ಬೇಡೆನ್ನೆನು'** ಎಂದು ಬಂದುದನ್ನು ಬಂದಂತೆ ಎದುರಿಸುವ ಕೆಚ್ಚು ಬೇಕು. ಬೇಕು ಎಂದು ಕೇಳುವುದೇ ಆದರೆ ಏನನ್ನು ಕೇಳುತ್ತಾನೆ ಭಕ್ತ ಭಗವಂತನ ಬಳಿಯಲ್ಲಿ? ಕಷ್ಟಗಳನ್ನು ಕೊಟ್ಟು ಪರೀಕ್ಷಿಸು ಎಂದು ಕೇಳುತ್ತಾನೆ :

***ಒಡೆದೋಡು ಎನ್ನ ಮನೆಯಲ್ಲಿಲ್ಲದಂತೆ ಮಾಡಯ್ಯಾ ;***
***ಕೊಡು ದೇವ ಎನ್ನ ಕೈಯಲ್ಲೊಂದು ಕರಿಕೆಯ***
***'ಮೃಡದೇವ ಶರಣೆ'ಂದು ಭಿಕ್ಷಕ್ಕೆ ಹೋದರೆ, ಅಲ್ಲಿ***
***'ನಡೆದೇವ' ಎಂದೆನಿಸು ಕೂಡಲಸಂಗಮದೇವಾ.***

ನೂರಾರು ಬಾರಿ ಉಳಿಯ ಪೆಟ್ಟುಗಳು ಬಿದ್ದು ಒಂದು ಮೂರ್ತಿಯಾಗುವಂತೆ ಹಲವಾರು ಅನುಭವಗಳ ಸುಖದುಃಖಗಳಿಂದ ಸಾಧಕನ ಹೃದಯ ಪರಿಪಾಕಗೊಳ್ಳುತ್ತದೆ. ಅಹಂಕಾರವನ್ನು ಕಳೆದುಕೊಂಡು ತಿಳಿಯಾಗಿ, ವಿಶ್ವಶಕ್ತಿಯನ್ನು ಪ್ರತಿಬಿಂಬಿಸುತ್ತಾ ವಿಶ್ವವನ್ನೇ ವ್ಯಾಪಿಸಲು ಅನುವಾಗುತ್ತದೆ. ಈ ಸ್ಥಿತಿಯಲ್ಲಿ ಅವನು ಸುಖದುಃಖಗಳನ್ನು ಅಳಿದು ದಂದ್ವಾತೀತನಾಗುತ್ತಾನೆ. ಆದುದರಿಂದ ಸಾಧಕ ತನಗೆ ಬಂದ ದುಃಖಗಳನ್ನೂ, ಕಠಿಣ ಪರೀಕ್ಷೆಗಳನ್ನೂ ***'ಶಿವನ ಕರುಣೆಯೇ ಈ ರೂಪದಿಂದ ಬಂದಿದೆ'*** ಎಂದು ಭಾವಿಸಿ ಸ್ವಾಗತಿಸಬೇಕು. ಭಕ್ತನನ್ನು ಶಿವ ನಾನಾ ರೀತಿಯಿಂದ ಪರೀಕ್ಷಿಸುತ್ತಾನೆ. ದೇವರ ದಾಸಿಮಯ್ಯನು ಹೇಳುವಂತೆ :

***ಹರ ತನ್ನ ಭಕ್ತರ ತಿರಿವಂತೆ ಮಾಡುವ,***
***ಒರೆದು ನೋಡುವ ಸುವರ್ಣದ ಚಿನ್ನದಂತೆ***
***ಅರೆದು ನೋಡುವ ಚಂದನದಂತೆ.***
***ಅರೆದು ನೋಡುವ ಕಬ್ಬಿನ ಕೋಲಿನಂತೆ.***
***ಬೆದರದೆ ಬೆಚ್ಚದೆ ಇದ್ದಡೆ ಕರವಿಡಿದು***
***ಎತ್ತಿಕೊಂಬ ನಮ್ಮ ರಾಮನಾಥನು.***

ಆತನು ಒಡ್ಡಿದ ಪರೀಕ್ಷೆಗಳಲ್ಲೆಲ್ಲಾ ತೇರ್ಗಡೆಯಾದರೆ ಶಿವ ಕೈಹಿಡಿದು ಮೇಲಕ್ಕೆ ಎತ್ತಿಕೊಳ್ಳುತ್ತಾನೆ. ಇದೇ ಮಾತನ್ನು ಬಸವಣ್ಣನವರು :

***ನಚ್ಚಿದೆನೆಂದರೆ, ಮೆಚ್ಚಿದೆನೆಂದರೆ,***
***ಸಲೆಮಾರುವೋದೆನೆಂದರೆ***
***ತನುವಲ್ಲಾಡಿಸಿ ನೋಡುವೆ ನೀನು.***
***ಮನವನಲ್ಲಾಡಿಸಿ ನೋಡುವೆ ನೀನು.***
***ಧನವಲ್ಲಾಡಿಸಿ ನೋಡುವೆ ನೀನು.***
***ಇದಕ್ಕೆಲ್ಲ ಅಂಜದಿದ್ದರೆ ಭಕ್ತಿಕಂಪಿತ ನಮ್ಮ***
***ಕೂಡಲಸಂಗಮದೇವಾ.***

ಎಂದಿದ್ದಾರೆ. ಭಕ್ತ ಹೀಗೆ ಏಕೈಕನಿಷ್ಠೆಯಿಂದ ಕೂಡಿದ್ದರೆ ಮಾತ್ರ ಶಿವ ಭಕ್ತಿಕಂಪಿತ. ಒಂದು ಅರ್ಥದಲ್ಲಿ ಭಕ್ತಿ ಬಹಳ ಸುಲಭ? ಎಲ್ಲರೂ ಅದನ್ನು ಸಾಧಿಸಬಹುದು; ಇನ್ನೊಂದು ಅರ್ಥದಲ್ಲಿ ಅದು ಬಹಳ ಕಷ್ಟ. ಅಚಲವಾದ ಕಠೋರ ನಿಷ್ಠೆಯಿಲ್ಲದಿದ್ದರೆ ಅದು ಫಲಕಾರಿಯಾಗದು. ಅದು ಎರಡು ಬಾಯಿಯ ಕತ್ತಿ; ಹೋಗುತ್ತಾ ಕೊಯ್ವುದು, ಬರುತ್ತ ಕೊಯ್ವುದು, ನಂಬಿ ಕರೆದರೆ ಮಾತ್ರ ಶಿವ 'ಓ' ಎನ್ನುತ್ತಾನೆ. ನಂಬದೆ ನೆಚ್ಚದೆ ಬರಿದೆ ಕರೆದರೆ ಆತನ ಕಿವಿಗೆ ಅದು ಬೀಳದು; ಹೃದಯಕ್ಕೆ ಅದು ತಾಗದು- ಎನ್ನುತ್ತಾರೆ ಬಸವಣ್ಣನವರು.

ಹೀಗೆ ಅಹಂಕಾರವನ್ನು ಬಿಟ್ಟು ಏಕೈಕ ನಿಷ್ಠೆಯಿಂದ ಪರಮಾತ್ಮನ ಮರೆಹೊಕ್ಕ ಸಾಧಕನ ಪ್ರೇಮವು **'ನಾನು'** ಎಂಬ ಸಂಕುಚಿತ ಸ್ವಾರ್ಥವನ್ನು ದಾಟುವುದರಿಂದ ನಿರ್ಹೇತುಕವಾಗುತ್ತದೆ; ಪ್ರತಿಫಲಾಪೇಕ್ಷೆಯಿಲ್ಲದಂತಾಗುತ್ತದೆ. ಲೌಕಿಕ ಅವಶ್ಯಕತೆಯ ದೃಷ್ಟಿಯಿಂದ ನಾವು ಒಂದು ವಸ್ತುವನ್ನು ನೋಡುತ್ತಿರುವವರೆಗೂ ಅದರ ಹಿಂದಿರುವ ಚಿರಂತನ ಸತ್ಯದ ಸ್ಪಷ್ಟ ರೂಪವನ್ನು ಕಂಡುಕೊಳ್ಳಲಾರೆವು. ಒಬ್ಬ ಮನುಷ್ಯನನ್ನು ಅವನಿಂದ ನಮಗೆ ಆಗುವ ಲೌಕಿಕ ಪ್ರಯೋಜನದ ದೃಷ್ಟಿಯಿಂದ ಅಳೆದಾಗ ಮನುಷ್ಯತ್ವದ ಬೆಲೆಯನ್ನೇ ಕಡೆಗಣಿಸದಂತಾಗುತ್ತದೆ. ಅವನಿಂದ ಪೂರ್ಣ







ಪ್ರಯೋಜನವನ್ನು ಪಡೆಯುವ ಮಾರ್ಗಗಳನ್ನು ಮಾತ್ರ ಹುಡುಕತೊಡಗುತ್ತೇವೆ. ಆದರೆ ಅವನನ್ನು ಚೈತನ್ಯಾತ್ಮಕ ಶಕ್ತಿಯೆಂಬ ನಿಸ್ವಾರ್ಥ ಪ್ರೇಮದಿಂದ ನೋಡಿದಾಗ ನನ್ನನ್ನು ಅವನಲ್ಲಿಯೂ ಕಂಡುಕೊಳ್ಳಲು ಸಮರ್ಥನಾಗುತ್ತೇನೆ. ಇದು ಪ್ರೇಮದ ಶಕ್ತಿ. ಅರಳುತ್ತಿರುವ ಸಣ್ಣ ಹೂವಿನಿಂದ ಹಿಡಿದು, ಹೊಳೆಯುತ್ತಿರುವ ನಕ್ಷತ್ರ ನೀಹಾರಿಕೆಗಳವರೆಗೂ ಎಲ್ಲೆಲ್ಲಿಯೂ, ಎಲ್ಲದರಲ್ಲಿಯೂ ಸೃಷ್ಟಿಶಕ್ತಿಯ ಅದ್ಭುತ ದರ್ಶನವನ್ನು ಕಂಡುಕೊಳ್ಳುವ ದಿವ್ಯದೃಷ್ಟಿಯನ್ನು ಪ್ರೇಮ ತಂದುಕೊಡುತ್ತದೆ.

*ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ*
*ಹಸ್ತಿನಿ ।*
*ಶುನಿ ಚೈವ ಶ್ವಪಾಕೇ ಚ ಪಂಡಿತಾಃ*
*ಸಮದರ್ಶಿನಃ ॥*

ಎಂದು ಗೀತೆ ಹೇಳುವಾಗ 'ಪಂಡಿತ' ಎಂಬ ಮಾತಿಗೆ, ಈ ಪ್ರೇಮದೃಷ್ಟಿಯಿಂದ ವಿಶ್ವವನ್ನೆ ತಬ್ಬಿದವನು ಎಂಬ ಅರ್ಥವನ್ನು ಕಲ್ಪಿಸಿದೆ. ಈ ಪ್ರೇಮದೃಷ್ಟಿ ಎಲ್ಲ ಸಾಧಕರಿಗೂ, ಭಕ್ತಿಯೋ, ಜ್ಞಾನವೋ, ಕರ್ಮವೋ- ಯಾವ ಮಾರ್ಗವನ್ನೇ ಅವಲಂಬಿಸಿರಲಿ, ಇದು ಮೂಲಧನವಿದ್ದಂತೆ; ತಳಹದಿಯಿದ್ದಂತೆ. ಇದರ ಮೇಲೆ ಸಾಧಕ ಬಗೆ ಬಗೆಯ ಸಾಧನೆಯಿಂದ ಕಟ್ಟಡವನ್ನು ಕಟ್ಟಬಹುದು.

ಪ್ರೇಮದ ತಳಹದಿಯನ್ನು ಹಾಕಿ ಪ್ರೇಮದಿಂದಲೇ ಕಟ್ಟಡವನ್ನು ಕಟ್ಟುವುದು ಭಕ್ತಿಮಾರ್ಗ. ದೈವತ್ವದ ಕಲ್ಪನೆಯ ತಾತ್ತ್ವಿಕ ಜಿಜ್ಞಾಸೆಯಾಗಲೀ, ವಾದವಿವಾದಗಳಿಗಾಗಲೀ ಭಕ್ತ ಕೈಹಾಕದೆ ಅಚಲವಾದ ಶ್ರದ್ಧೆಯಿಂದ ಆ ದೈವಶಕ್ತಿಯನ್ನು ನಂಬಿ ತನ್ನ ಹೃದಯದ ಅಖಂಡ ಪ್ರೇಮವನ್ನು ಆತನಿಗೆ ಧಾರೆಯೆರೆಯುತ್ತಾನೆ. ಈ ಪ್ರೇಮ ತತ್ವತಃ ಅಲೌಕಿವಾದುದಾದರೂ, ಅನಂತವಾದ ಮತ್ತು ನಿರಾಕಾರವಾದ ಪರಾತ್ಪರ ಸತ್ಯವನ್ನು **'ಸಾಂತ'** ಮತ್ತು **'ಸಾಕಾರ'** ಸ್ವರೂಪದಿಂದ ಉಪಾಸಿಸುವಂತೆಯೇ, ಈ ಪ್ರೇಮ ಪ್ರಕಟವಾಗಲು ಅನೇಕ ಲೌಕಿಕ ವಿಧಾನಗಳನ್ನು ಅನುಸರಿಸುವುದು. ಲೌಕಿಕ ಬಾಂಧವ್ಯದ ಅನೇಕ ಸಂಬಂಧಗಳನ್ನು ಭಗವಂತನೊಡನೆ ಕಲ್ಪಿಸಿಕೊಂಡು, ತನ್ನ ಪ್ರೇಮವನ್ನು ಆ ಮೂಲಕ ಅವನಿಗೆ ಭಕ್ತ ನಿವೇದಿಸುತ್ತಾನೆ. ಈ ದೃಷ್ಟಿಯಿಂದ ಭಕ್ತಿಯಲಿ ದಾಸ್ಯ, ಸಖ್ಯ, ವಾತ್ಸಲ್ಯ, ಮಧುರ ಮತ್ತು ಶಾಂತ ಎಂಬ ಐದು ಭಾಗಗಳನ್ನು ಹೇಳುತ್ತಾರೆ. ಈ ಎಲ್ಲ ಭಾವಗಳನ್ನು ವೈಷ್ಣವ ಭಕ್ತಿಸಾಧನೆಯಲ್ಲಿ, ಅಂದರೆ ಕನ್ನಡವನ್ನು ಲಕ್ಷಿಸಿ ಹೇಳುವುದಾದರೆ ದಾಸಸಾಹಿತ್ಯದಲ್ಲಿ, ಹೆಚ್ಚು ಸ್ಪಷ್ಟವಾಗಿ ಕಾಣುತ್ತೇವೆ.

*(ಮುಂದುವರೆಯುತ್ತದೆ)*

## ಬಸವಣ್ಣ

**ದಲಿತರ ದನಿಯಾದ, ಶೋಷಕರಿಗೆ ಶೂಲವಾದ**
**ಆರ್ತರ ಅದೃಷ್ಟವಾದ, ಕಾಯಕದ ಕಲಿಯಾದ**
**ದಾಸೋಹದ ದಾರ್ಶನಿಕನಾದ, ಸ್ತ್ರೀಕುಲದ**
**ಉದ್ಧಾರಕನಾದ**
**ಸಾಹಿತ್ಯಕ್ಕೆ ಸ್ಫೂರ್ತಿಯಾದ, ಧರ್ಮಕ್ಕೆ ದ್ರಷ್ಟರನಾದ**
**ನೀತಿಗೆ ನೇತಾರನಾದ, ಶೀಲಕ್ಕೆ ಸಂಪತ್ತಾದ**
**ಸಜ್ಜನಿಕೆಗೆ ಹೆಜ್ಜೆಯಾದ, ಕುಲಮದಕ್ಕೆ ಕೊಡಲಿಯಾದ,**
**ನೊಂದವರಿಗೆ ನೆರಳಾದ, ಅನುಭಾವಕ್ಕೆ ಆಶ್ರಯವಾದ**
**ಅರಿವಿಗೆ ಗುರುವಾದ, ಶಿವಯೋಗಕ್ಕೆ ಶಿಖರವಾದ**
**ಕೊನೆಗೆ ಬಯಲಲ್ಲಿ ಬಯಲಾದ !**

**– ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳು**
**ಸಿದ್ಧಗಂಗಾ ಮಠ**





# ಕ್ಷಮೆ

– ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯ *

"To err is human but to forgive is divine" ಎಂಬ ಮಾತು ಒಂದಿದೆ. ತಪ್ಪು ಮಾಡುವುದು ಸಹಜ; ಆದರೆ ಕ್ಷಮಿಸುವುದು ದೇವಗುಣ ಎಂದು ಬಿಡಬಹುದು; ಆದರೆ ಹೇಳಿದಷ್ಟು ಸುಲಭವಲ್ಲ ಕ್ಷಮಿಸುವುದು. ಕತ್ತೆ ಎಂದು ಮಾತಾಡಿದರೂ ಸಾಕು ಹಲ್ಲುದುರಿಸಿಬಿಡುತ್ತಾನೆ. ಬಯ್ಯಿಸಿ ಕೊಳ್ಳುವವನು ಒಂದು ಪಕ್ಷ ಆತ ದುರ್ಬಲನಾದರೆ ಆಗ ಸುಮ್ಮನಾಗಬಹುದು. ಆದರೆ ಒಳಗೊಳಗೇ ಜಾಲ ಹರಡುತ್ತಿರುತ್ತಾನೆ ಸೇಡು ತೀರಿಸಿಕೊಳ್ಳಲು.

ಇನ್ನು ಕೆಲವರಿರುತ್ತಾರೆ. ಕತ್ತೆ ಎಂದಾಗ ಎಷ್ಟು ಸಿಟ್ಟು ಬಂದರೂ ತೋರಿಸಿಕೊಳ್ಳುವುದಿಲ್ಲ; ಬಹಳ ಲೌಕಿಕ ಅನುಭವ ಉಳ್ಳ ಜನ ಅವರು. ಆ ಮಾತಿನ ಪರಿಣಾಮ ಏನು ? ನಾನು ಅದಕ್ಕೆ ಪ್ರತಿಕ್ರಿಯಿಸಿದರೆ ಆಗುವ ಪರಿಣಾಮವೇನು ಎಂಬುದೆಲ್ಲವನ್ನೂ ವಿವರ ವಿವರವಾಗಿ ವಿಶ್ಲೇಷಿಸಿಕೊಂಡ ನಂತರವೇ ತುಂಬಾ ಬುದಿವಂತಿಕೆಯಿಂದ ಪ್ರತಿಕ್ರಿಯಿಸಲು ಯತ್ನಿಸುತ್ತಾರೆ. ಲೌಕಿಕರಲ್ಲವೆ ಅವರು ?

ಇನ್ನು ಹಲವರು. ಎದುರಿಗಿರುವವನು ಬಯ್ಯುತ್ತಿದ್ದಂತೆ ತಮ್ಮನ್ನು ಸಹನಾ ಮೂರ್ತಿಗಳಂತೆ ಪ್ರದರ್ಶಿಸಿಕೊಳ್ಳಲು ಸಿದರಾಗುತ್ತಾರೆ. ತೋರಿಕೆಯ ಕ್ಷಮೆಯನ್ನು ಮೆರೆಯುತ್ತಾರೆ. ಆದರೆ ಒಳಗೆ ದ್ವೇಷದ ಹಲ್ಲು ಮಸೆಯುತ್ತಿರುತ್ತವೆ. ವಿಷದ ಮುಳ್ಳುಗಳು ಬೆಳೆಯುತ್ತಲೇ ಇರುತ್ತವೆ. ಸೇಡು ಉಗ್ರವಾಗಿ ತನ್ನ ಕ್ರಿಯೆಗೆ ಸನ್ನದವಾಗಿರುತ್ತದೆ.

ಆದರೆ ಅಪರೂಪಕ್ಕೆ ಕೆಲವರು ಸಿಗುತ್ತಾರೆ. ನೀವು ಬಯ್ಯುವುದಿಲ್ಲ, ಹಿಂಸಿಸಿದರೂ ಕೊನೆಗೆ ಕೊಂದರೂ ಅವರು ಪ್ರತಿಹಿಂಸೆಗೆ ಸಿದವಾಗುವುದಿಲ್ಲ. ಬಹುಶಃ ಇಂಥವರು ಸಾವಿರಕ್ಕೆ ಒಬ್ಬ ಅಥವಾ ಕೋಟಿಗೆ ಒಬ್ಬರು ಎನ್ನಬಹುದು. ಉದಾಹರಣೆಗೆ ಶಿಲುಬೆಗೇರಿಸಿದ ಆ ಕ್ರಿಸ್ತನನ್ನೆ ನೋಡಿ.

ಹಬ್ಬದ ನೆಪದಲ್ಲಿಯಾದರೂ ಆತನನ್ನು ವಿಮುಕ್ತಗೊಳಿಸಲು ಯೋಚಿಸಿದ ಪಿಲಾತನ ಯೋಜನೆಗೆ ವಿರುದವಾಗಿ ಬರಬ್ಬಸನನ್ನೆ ಮುಕ್ತನನ್ನಾಗಿಸಿ ಆ ಪರಿಸಾಯರು ಕ್ರಿಸ್ತನನ್ನು ಶಿಲುಬೆಯ ಶಿಕ್ಷೆಗೆ ಗುರಿಮಾಡಿದ್ದಾರೆ. ತನ್ನ ಶಿಲುಬೆಯನ್ನು ತಾನೇ ಹೊತ್ತು ನಡೆಯುತ್ತಿದ್ದ ಏಸು ಕಾಲು ಜಾರಿದಾಗ ಅಣಕಿಸಿದ್ದಾರೆ. ಶಿಲುಬೆಯನ್ನು ನೆಟ್ಟು ಅದಕ್ಕೆ ಅವನನ್ನು ನೇತುಹಾಕಿ ಅವನ ಅಂಗೈಗಳಿಗೆ, ಅಂಗಾಲುಗಳಿಗೆ ಮತ್ತು ಎದೆಗೆ ಮೊಳೆಗಳನ್ನು ಬಡಿಯುವಾಗ ಕೇಕೆ ಹಾಕಿ ನಕ್ಕಿದ್ದಾರೆ. ಅಷ್ಟೇ ಅಲ್ಲ ಅವನ ತಲೆಗೆ ಮುಳ್ಳಿನ ಕಿರೀಟವನ್ನು ಇಟ್ಟಾಗ ಓಹೋ ದೇವರ ಮಗನೇ ಶಿಲುಬೆಯಿಂದಿಳಿದು ಬರಲಾರೆಯಾ ಎಂದು ಅಣಕಿಸಿದ್ದಾರೆ.

ಸಾವಿರ ಚೇಳುಗಳು ಒಮ್ಮೆಗೇ ಕಡಿದಂತೆ ಇಡೀ ಶರೀರವೆಲ್ಲ ಯಾತನಾಮಯವಾಗಿದ್ದಾಗ ''ನಿನ್ನ ದೇವರನ್ನು ಕರೆದು ತರಲಾಗುವುದಿಲ್ಲವೆ'' ಎಂದು ಗೇಲಿ ಮಾಡಿದ್ದಾರೆ. ಇಷ್ಟೆಲ್ಲಾ ಗೇಲಿ ಅಣಕಗಳ ಮಧ್ಯೆ, ಮೈಯನ್ನೆಲ್ಲ ತಿನ್ನುತ್ತಿರುವ ಯಾತನೆಯ ಮಧ್ಯೆ ಕ್ರಿಸ್ತನ ಎದೆಯಲ್ಲಿ ಕ್ರೋಧ ಕೆರಳುವುದಿಲ್ಲ. ಮಾತೃವಾತ್ಸಲ್ಯ ಉಕ್ಕತೊಡಗುತ್ತದೆ. ತನ್ನನ್ನು ದಂಡಿಸಿ ಹಿಗ್ಗುತ್ತಿರುವವರನ್ನು ಕಂಡು ಮರುಕ ಮೂಡುತ್ತದೆ. ಢಂಭಾಚಾರಕ್ಕೆ ಸಿಕ್ಕಿ ಹಾದಿ ತಪ್ಪಿಸುವ ಆ ಪರಿಸಾಯರನ್ನು ಕಂಡು ಕರುಣೆಯ ಕಡಲು ಉಕ್ಕುತ್ತದೆ. ಶಪಿಸುವುದಕ್ಕೆ ಬದಲು ಹೃದಯದಿಂದ ಕರುಣೆಯ ಹಾಗೂ ಕ್ಷಮೆಯ ಗಂಗೆ ಧಾರೆ ಧಾರೆಯಾಗಿ ಹರಿಯತೊಡಗುತ್ತದೆ. "Forgive them my Lord for they know not what they do" (ದೇವರೇ ಅವರನ್ನು ಕ್ಷಮಿಸಿಬಿಡು; ತಾವೇನನ್ನು ಮಾಡುತ್ತಿದ್ದೇವೆಂಬುದು ಅವರಿಗೆ ತಿಳಿದಿಲ್ಲ.) ಎಂದು ತನ್ನ ತಂದೆಯಾದ ದೇವರಲ್ಲಿ ಅವರನ್ನೆಲ್ಲ ಕ್ಷಮಿಸುವಂತೆ ಪ್ರಾರ್ಥಿಸುತ್ತಾನೆ. ಈ ಕ್ಷಮೆಯನ್ನೇ ನಾವು Divine ಎನ್ನುವುದು. ಇಂಥ ಕ್ಷಮೆಯ ಹಿನ್ನೆಲೆಗೆ ಇರುವ ಸಹನಾ ಶಕ್ತಿ ಮಾನವಪ್ರೇಮ ಹಾಗೂ ಅನುಕಂಪಗಳು ಹಿಮಾಲಯ ಸದೃಶವಾದುವು. ಎದುರಿಗಿರುವವರ ನೀಚತನವನ್ನು ತೊಡೆಯಲು ಸಿದವಾಗುತ್ತವೆ. ಮತ್ತೆ ಶಿಲುಬೆಗೇರಬಲ್ಲೆಯಾ ಎಂದರೆ ಕ್ರಿಸ್ತ ಮತ್ತೆ ಉದಿಸಿ ಬಂದಾನು; ತನ್ನನ್ನು ತಾನು ಮತ್ತೆ ಶಿಲುಬೆಗೇರಿಸಿಕೊಂಡಾನು. ಅಲ್ಲಿ ಕಾಣುವುದು ಬಲಿದಾನದ ಆಕಾಂಕ್ಷೆಯಲ್ಲ; ಮೂರ್ಖತನವನ್ನರಿಯಲಾರದ ತನ್ನ ಜೊತೆಯ ಮಾನವರನ್ನು ಕುರಿತ ಅನುಕಂಪ ಮತ್ತು ಪ್ರೀತಿಗಳು. ಎಲ್ಲಿಯವರೆಗೆ ಅಂತಃಕರಣದ ತುಂಬ ಈ ಅನುಕಂಪ ಪ್ರೇಮ ಹಾಗೂ ಸಹನಾಶಕ್ತಿಗಳು ತುಂಬಿರುತ್ತವೆಯೋ ಅಲ್ಲಿಯವರೆಗೂ ಈ ಕ್ಷಮೆಯು ಸದಾ ಜಾಗೃತವಾಗಿರುತ್ತದೆ. ಇದರ ಗುರಿ ಮಾನವಪ್ರೇಮ; ಕರುಣೆ. ಎದುರಾಗಿರುವವರ ಮನಸ್ಸನ್ನು ಪರಿವರ್ತಿಸಬೇಕೆನ್ನುವ ತವಕ; ಸಂಕಲ್ಪ. ಅದಕ್ಕಾಗಿಯೇ ಈ ಕ್ಷಮೆಯನ್ನು Divine ಎನ್ನುವುದು. □

* ಮಾಜಿ ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು









# 'ರಾಷ್ಟ್ರೀಯ ಬಸವ ಪ್ರಶಸ್ತಿ ಪುರಸ್ಕೃತ' ಡಾ. ಗೊ.ರು. ಚನ್ನಬಸಪ್ಪ

– ಎಚ್.ಎಸ್. ಸಿದ್ಧಗಂಗಪ್ಪ *

ಸರಳತೆ, ಸಜ್ಜನಿಕೆ, ಸಹೃದಯತೆಯಿಂದ ನಾಡಿನ ಜನರ ಪ್ರೀತಿ ವಿಶ್ವಾಸಕ್ಕೆ ಪಾತ್ರರಾಗಿರುವ ಡಾ. ಗೊ.ರು. ಚನ್ನಬಸಪ್ಪನವರು ಮಾಡುವ ಕೆಲಸದಲ್ಲಿ ಶ್ರದ್ಧೆ, ನಿಷ್ಠೆ, ಶಿಸ್ತು, ದಕ್ಷತೆ, ಪ್ರಾಮಾಣಿಕತೆ, ಸಮಯ ಪರಿಪಾಲನೆ, ನಿರ್ಮಲವಾದ ಮನಸ್ಸು, ಬದ್ಧತೆ, ತುಡಿತ, ಕಳಕಳಿ, ಅರ್ಪಣಾಭಾವ, ಆತ್ಮವಿಶ್ವಾಸ ಈ ಎಲ್ಲಾ ಗುಣಗಳನ್ನೂ ಮೈಗೂಡಿಸಿ ಕೊಂಡಿರುವ ಅಪರೂಪದ ವ್ಯಕ್ತಿ. ಜನಪದ ಸಾಹಿತ್ಯ, ಶರಣ ಸಾಹಿತ್ಯ, ಸಾಂಸ್ಕೃತಿಕ, ಸಾಮಾಜಿಕ, ಧಾರ್ಮಿಕ ಹೀಗೆ ಹಲವಾರು ಕ್ಷೇತ್ರಗಳಲ್ಲಿ ತಮ್ಮನ್ನು ಅರ್ಪಿಸಿಕೊಂಡು ವಿಶಿಷ್ಟ ಸೇವೆ ಸಲ್ಲಿಸುತ್ತಿರುವ ಡಾ. ಗೊ.ರು.ಚ. ಅವರು ನಮ್ಮ ನಾಡಿನ ಪ್ರಸಿದ್ಧ ಜಾನಪದ ವಿದ್ವಾಂಸರು. ಪ್ರತಿಭೆ ಮತ್ತು ಸಂಘಟನೆ ಎರಡೂ ಒಬ್ಬ ವ್ಯಕ್ತಿಯಲ್ಲಿ ಇರುವುದು ಅಪರೂಪ. ಜೊತೆಗೆ ಉತ್ತಮ ವಾಗ್ಮಿ. ಈ ಮೂರರ ತ್ರಿವೇಣಿ ಸಂಗಮ ಡಾ. ಗೊ.ರು.ಚ. ಅವರು.

"ಎಣ್ಣೆಗೆಂಪಿನ ಬಣ್ಣ, ಸೂಕ್ಷ್ಮಗ್ರಾಹಿ ಕಣ್ಣುಗಳು, ತೆಳು ದೇಹ, ಶುಭ್ರ ಬಿಳಿಯ ಲುಂಗಿ ಮತ್ತು ಅದೇ ಬಣ್ಣದ ಜುಬ್ಬ, ಸದಾ ಸರಸ್ವತಿಯ ಆರಾಧನೆ, ದೀನ ದಲಿತರ ಹಾಗೂ ಅವರ ಸಾಹಿತ್ಯದ ಚಿಂತನೆ – ಇವುಗಳ ನೇರ ಸಂಬಂಧಕ್ಕೆ ಮತ್ತೊಂದು ಹೆಸರು ಗೊ.ರು.ಚನ್ನಬಸಪ್ಪ" – ಇದು ಅವರ ಆತ್ಮೀಯರಲ್ಲಿ ಒಬ್ಬರಾಗಿದ್ದ ಜಾನಪದ ಹಾಡಿನ ಮೋಡಿಗಾರ ಶ್ರೀ ಕೆ.ಆರ್. ಲಿಂಗಪ್ಪನವರು ಡಾ. ಗೊ.ರು.ಚ. ಅವರ ವ್ಯಕ್ತಿತ್ವದ ಬಗ್ಗೆ ಆಡಿರುವ ಆತ್ಮೀಯ ನುಡಿಗಳು.

ಡಾ. ಗೊ.ರು.ಚ. ಅವರು ಹುಟ್ಟಿದ್ದು ಮೇ ೧೮, ೧೯೩೦ರಲ್ಲಿ. ಚಿಕ್ಕಮಗಳೂರು ಜಿಲ್ಲೆ ತರೀಕೆರೆ ತಾಲ್ಲೂಕು ಗೊಂಡೇದಹಳ್ಳಿಯಲ್ಲಿ. ತಂದೆ ಗಿರಿಗೌಡರ ರುದ್ರಪ್ಪ ಮತ್ತು ತಾಯಿ ಅಕ್ಕಮ್ಮ. ಮೂರು ಹೆಣ್ಣುಮಕ್ಕಳ ನಂತರ ಗಂಡುಮಗು ಹುಟ್ಟಿದಾಗ ತಾಯಿಯ ಬಹುಕಾಲದ ಬಯಕೆ ಈಡೇರಿತು. ಮೂರು ಹೆಣ್ಣಿನ ನಂತರ ಗಂಡು ಹುಟ್ಟಿದರೆ ಅದೃಷ್ಟವಂತನಾಗುತ್ತಾನೆ ಎಂಬುದು ಜನಪದ ನಂಬಿಕೆ. ಆ ನಂಬಿಕೆ ಡಾ. ಗೊ.ರು.ಚ. ಅವರ ಪಾಲಿಗೆ ಸುಳ್ಳಾಗಲಿಲ್ಲ. ಅದೃಷ್ಟವಂತ ಎಂದರೆ ಶ್ರೀಮಂತನೇ ಆಗಬೇಕೆಂದಿಲ್ಲ. ಸಾಮಾಜಿಕ, ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರದಲ್ಲಿ ತೊಡಗಿಸಿಕೊಂಡು ಕೆಲಸ ಮಾಡಿ ಹೆಸರು ಗಳಿಸುವುದೂ ಒಂದು ಭಾಗ್ಯವೇ. ಅದೇಕೋ ಏನೋ ಲಕ್ಷ್ಮಿ ಇವರ ಕೈಹಿಡಿಯಲಿಲ್ಲ. ಆದರೆ ಸರಸ್ವತಿ ಕೈಬಿಡಲಿಲ್ಲ.

ತಂದೆ ರುದ್ರಪ್ಪನವರದು ಓನಾಮ ಕಲಿಸುವ ಮಾಸ್ತರಿಕೆ ಕೆಲಸ. ತಂದೆ ಮಗನ ಕೈಹಿಡಿದು ಓನಾಮ ಕಲಿಸಿ ವಿದ್ಯೆಗೆ ಭದ್ರ ಬುನಾದಿಯನ್ನು ಹಾಕಿದರೆ, ತಾಯಿ ಅಕ್ಕಮ್ಮ ಜಾನಪದ ರಸಗಂಗೆಯಲ್ಲಿ ಸ್ನಾನಮಾಡಿಸಿ, ಜಾನಪದದ ಬಗೆಗೆ ಆಸಕ್ತಿ ಮತ್ತು ಪ್ರೀತಿ ಉಂಟಾಗುವಂತೆ ಮಾಡಿದರು. ತಾಯಿ ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುತ್ತಾ ಜನಪದ ತ್ರಿಪದಿಗಳನ್ನು ಹಾಡುತ್ತಿದ್ದರು. ಅವರು ಹಾಡುತ್ತಿದ್ದ ಹಾರೈಕೆಯ ಹಾಡು ಗೊ.ರು.ಚ. ಅವರ ಪಾಲಿಗೆ ನಿಜವಾಗಿದೆ. ಹೆತ್ತ ತಾಯಿಯ ಆಶೀರ್ವಾದ ಅವರನ್ನು ರಕ್ಷಿಸುತ್ತಾ ಬಂದಿದೆ.

ಮನೆಯಲ್ಲಿ ಹಾಸಿ ಹೊದೆಯುವಷ್ಟು ಬಡತನವಿದ್ದರೂ ಹೃದಯ ಶ್ರೀಮಂತಿಕೆಗೆ ಕಡಿಮೆಯಿರಲಿಲ್ಲ. ಅವರದು ಆದರ್ಶ ಕುಟುಂಬ; ನೆಮ್ಮದಿಯ ಸಂಸಾರ. ಹಾಗಾಗಿ ಬಡತನವೇ ಅವರ ಮುಂದೆ ಸೋಲಬೇಕಾಯಿತು.

## ಚಿನ್ನ ಮುಟ್ಟೆನೆಂಬ ಪ್ರಮಾಣ

ಅಚಾರ್ಯ ವಿನೋಬಾ ಭಾವೆಯವರು ಭೂದಾನ ಚಳವಳಿ ಕೈಗೊಂಡಿದ್ದರು. ಅವರ ಪಾದಯಾತ್ರೆಯಲ್ಲಿ ಕಡ್ಲೂರಿನ ಬಯಲಿನಲ್ಲಿ ಒಂದು ಬಹಿರಂಗ ಸಭೆ ನಡೆಯಿತು. ಅವರ ಭೂದಾನ ಚಳವಳಿಯ ಬಗ್ಗೆ ತಿಳಿದಿದ್ದ ಜನ ಅಪಾರ ಸಂಖ್ಯೆಯಲ್ಲಿ ಸೇರಿದ್ದರು. ಅವರಿಗಾಗಿ ಎತ್ತರವಾದ ವೇದಿಕೆಯನ್ನು ನಿರ್ಮಾಣ ಮಾಡಲಾಗಿತ್ತು. ಅವರು ಹಿಂದಿಯಲ್ಲಿ ಮಾತನಾಡಿದ್ದನ್ನು ಖಾದ್ರಿ ಶಾಮಣ್ಣನವರು ಕನ್ನಡಕ್ಕೆ ತರ್ಜುಮೆ ಮಾಡಿ ಹೇಳುತ್ತಿದ್ದರು. ವಿನೋಬಾ ಭಾವೆಯವರ ಭೂದಾನ ಮತ್ತು ಗ್ರಾಮದಾನ ಚಳವಳಿಯ ಹಿನ್ನೆಲೆ ಮತ್ತು ಆಶಯಗಳು ಡಾ. ಗೊ.ರು.ಚ. ಅವರ ಮೇಲೆ ಗಾಢವಾದ ಪ್ರಭಾವವನ್ನು ಬೀರಿದವು. ಚಳುವಳಿಯ ಯಶಸ್ವಿಗೆ ವಿನೊಭಾ ಅವರು ಜನರ ನೆರವು ಕೋರಿದಾಗ

* ೧೬೧೭, ಮಾತೃಶ್ರೀ, ಸರ್ ಎಂ.ವಿ. ಮುಂದುವರೆದ ಬಡಾವಣೆ, ೮ನೇ ಬ್ಲಾಕ್, ಸ್ಫೂರ್ತಿಧಾಮದ ಎದುರು, ಮುದ್ದಿನಪಾಳ್ಯ ಮುಖ್ಯರಸ್ತೆ, ಬೆಂಗಳೂರು–೯೧






ಡಾ. ಗೊ.ರು. ಚನ್ನಬಸಪ್ಪನವರಿಗೆ ಘನತವೆತ್ತ ರಾಷ್ಟ್ರಪತಿಗಳಾದ ಡಾ. ಪ್ರಣವ ಮುಖರ್ಜಿ ಅವರಿಂದ ೨೦೧೩ರ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಪ್ರದಾನ

ಡಾ. ಗೊ.ರು.ಚ. ಅವರು ತಮ್ಮ ಅಕ್ಕ ಮದುವೆಯಲ್ಲಿ ಉಡುಗೊರೆಯಾಗಿ ನೀಡಿದ್ದ ಬಂಗಾರದ ಉಂಗುರವನ್ನು ವೇದಿಕೆಯ ಬಳಿ ಹೋಗಿ ವಿನೋಬಾ ಅವರ ಆಪ್ತಕಾರ್ಯದರ್ಶಿ ಕೈಗೆ ಕೊಟ್ಟು ಬಂದರು. ಕಾರ್ಯದರ್ಶಿ ವಿನೋಬಾ ಅವರಿಗೆ ಉಂಗುರದ ವಿಚಾರ ತಿಳಿಸಿದರು. ಆಗ ವಿನೋಬಾ ಅವರು ಡಾ. ಗೊ.ರು.ಚ. ಅವರು ನೀಡಿದ ಉಂಗುರದ ಬಗ್ಗೆ ಪ್ರಸ್ತಾಪಿಸಿ "ಓರ್ವ ಯುವಕ ತನ್ನಲ್ಲಿದ್ದ ಉಂಗುರವನ್ನು ದಾನಮಾಡಿದ್ದಾನೆ. ವಿನೋಬಾ ಈ ಉಂಗುರ ಇಟ್ಟುಕೊಳ್ಳುವುದಿಲ್ಲ. ಇದು ಗ್ರಾಮೀಣ ಜನರಿಗೆ ಸದ್ವಿನಿಯೋಗವಾಗಬೇಕು. ಆ ಯುವಕನಿಗೆ ಒಂದು ಮಾತು. ಕೇವಲ ಕೈಯಲ್ಲಿದ್ದ ಬಂಗಾರ ಕೊಟ್ಟರೆ ಸಾಲದು. ಇನ್ನು ಮುಂದೆ ಎಂದೆಂದಿಗೂ ಬಂಗಾರವನ್ನು ಮುಟ್ಟುವುದಿಲ್ಲವೆಂಬು ಶಪಥಾ ಮಾಡಬೇಕು" ಎಂದು ತಮ್ಮ ಭಾಷಣದಲ್ಲಿ ತಿಳಿಸಿದರು. ವಿನೊಬಾ ಅವರ ಮಾತುಗಳಿಂದ ಪ್ರಭಾವಿತರಾದ ಡಾ. ಗೊ.ರು.ಚ. ಅವರು ಅಂದೇ "ಅಭೂಷಣ ವ್ರತ" ಕೈಗೊಂಡರು. ಕೈಗೊಂಡಿದ್ದು ಅಷ್ಟೇ ಅಲ್ಲ, ಅಂದಿನಿಂದ ಇಂದಿನವರೆವಿಗೂ ಅದನ್ನು ಪಾಲಿಸಿಕೊಂಡು ಬಂದಿದ್ದಾರೆ. ಅಲ್ಲದೆ ಅಂದಿನಿಂದ ಖಾದಿ ಬಟ್ಟೆಯನ್ನು ಬಿಟ್ಟು ಬೇರೆಯನ್ನು ತೊಟ್ಟಿಲ್ಲ. ಬೇರೆಯವರ ಆದರ್ಶಗಳನ್ನು ವೇದಿಕೆ ಮೇಲೆ ಜನರು ತಲೆದೂಗುವಂತೆ ಹೇಳುವ ಇಂದಿನ ಸಮಾಜದಲ್ಲಿ ನುಡಿದಂತೆ ನಡೆಯುವರು ತುಂಬಾ ವಿರಳ. ಇಂಥ ಅಪರೂಪದ ವ್ಯಕ್ತಿಗಳಲ್ಲಿ ಡಾ. ಗೊ.ರು.ಚ. ಅವರದು ಎದ್ದು ಕಾಣುವ ಹೆಸರು.

## ವೃತ್ತಿ ಜೀವನ

ಜೂನ್ ೧, ೧೯೪೮ ರಂದು ಶಿಕ್ಷಕರಾಗಿ ವೃತ್ತಿ ಜೀವನವನ್ನು ಆರಂಭಿಸಿದ ಡಾ. ಗೊ.ರು.ಚ. ಅವರು ೧೯೬೦ರಲ್ಲಿ ಸಮುದಾಯ ಅಭಿವೃದ್ಧಿ ಇಲಾಖೆಯ ಸಮಾಜ ಶಿಕ್ಷಣ ವಿಸ್ತರಣಾಧಿಕಾರಿಯಾಗಿ, ನಂತರ ವಾರ್ತಾ ಇಲಾಖೆಯ 'ಪಂಚಾಯತ್ ರಾಜ್ಯ' ಪತ್ರಿಕೆಯ ಸಹಾಯಕ ಸಂಪಾದಕರಾಗಿ ಸೇವೆ ಸಲ್ಲಿಸಿದರು. ಆ ಸಂದರ್ಭದಲ್ಲಿ 'ಕನ್ನಡ ನಾಡಿನ ಧಾರ್ಮಿಕ ಆಚರಣೆಗಳು', ಕನ್ನಡ ಸಾಹಿತ್ಯ ಪರಿಷತ್ತಿನ ಸುವರ್ಣ ಮಹೋತ್ಸವ' ಸಾಕ್ಷ ಚಿತ್ರಗಳಿಗೆ ಸಾಹಿತ್ಯವನ್ನು ಒದಗಿಸಿದರು. ವಾರ್ತಾ ಇಲಾಖೆಯಿಂದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಗೆ ನಿಯೋಜಿಸಲ್ಪಟ್ಟರು. ಅಲ್ಲಿ ಸಾಕ್ಷ್ಯಚಿತ್ರ ನಿರ್ಮಾಣವು ಸೇರಿದಂತೆ ಹಲವಾರು ಪ್ರಗತಿಪರ ಯೋಜನೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಅನುಷ್ಠಾನಗೊಳಿಸಿ, ಮೇಲಾಧಿಕಾರಿಗಳ ಹಾಗೂ ಸರ್ಕಾರದ ಪ್ರಶಂಸೆಗೆ ಪಾತ್ರರಾದರು. ಆರೋಗ್ಯ ಇಲಾಖೆಯಲ್ಲಿ ಪ್ರಕಟಣೆಗಳ ಸಂಪಾದಕರಾಗಿ, ನಂತರ ಉಪ ನಿರ್ದೇಶಕರಾಗಿ ಸೇವೆ ಸಲ್ಲಿಸಿ ನಿವೃತ್ತಿ ಹೊಂದಿದರು. ಅವರು ನಿವೃತ್ತಿ ನಂತರ ಸಾಮಾಜಿಕ ಹಾಗೂ ಸಾಂಸ್ಕೃತಿ ಚಟುವಟಿಕೆಗಳಲ್ಲಿ ತಮ್ಮನ್ನು






ಸಂಪೂರ್ಣವಾಗಿ ತೊಡಗಿಸಿಕೊಂಡು ನಿಷ್ಕಾಮ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ.

## ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ

ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿದ್ದ ಶ್ರೀ ಜಿ. ನಾರಾಯಣ ಅವರು ಜಾನಪದಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕೆಂಬ ವಿಚಾರ ಮಾಡಿ ಉಪ ಸಮಿತಿಯೊಂದನ್ನು ರಚಿಸಿದರು. ಡಾ. ಹೆಚ್.ಎಲ್. ನಾಗೇಗೌಡ ಅವರು ಅಧ್ಯಕ್ಷರಾಗಿದ್ದ ಆ ಸಮಿತಿಗೆ ಡಾ. ಗೊ.ರು.ಚ. ಅವರನ್ನೂ ಸದಸ್ಯರನ್ನಾಗಿ ಮಾಡಲಾಯಿತು. ನಂತರ ಪರಿಷತ್ತು ಜಾನಪದ ಕಲೆಗಳ ಸಮೀಕ್ಷೆ ಮಾಡಿಸಿ, ಆ ಬಗ್ಗೆ ಜಿಲ್ಲಾ ಮಟ್ಟದಲ್ಲಿ, ರಾಜ್ಯ ಮಟ್ಟದಲ್ಲಿ ಕಲಾ ಪ್ರದರ್ಶನ, ಗ್ರಂಥ ಪ್ರಕಟಣೆ, ಸಾಕ್ಷ್ಯಚಿತ್ರ ನಿರ್ಮಾಣ ಮೊದಲಾದ ಯೋಜನೆಗಳನ್ನು ರೂಪಿಸಿ, ಅದರ ಅನುಷ್ಠಾನಕ್ಕಾಗಿ ಒಂದು ಸಮಿತಿಯನ್ನು ನೇಮಿಸಿ ಡಾ. ಗೊ.ರು.ಚ. ಅವರನ್ನೇ ಆ ಸಮಿತಿಯ ಸಂಚಾಲಕರನ್ನಾಗಿ ನೇಮಿಸಿತು. ಈ ಕಾರ್ಯದಲ್ಲಿ ಡಾ. ಗೊ.ರು.ಚ. ಹಗಲು ರಾತ್ರಿಗಳೆನ್ನದೇ ನಿರತರಾದರು.

ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರು ಪರಿಷತ್ತಿನ ಅಧ್ಯಕ್ಷರಾಗಿದ್ದಾಗ ಮೊದಲು ಡಾ. ಸಾ.ಶಿ. ಮರುಳಯ್ಯ ಅವರು ಕಾರ್ಯದರ್ಶಿಯಾಗಿದ್ದರು. ಅವರು ಕೆಲವು ಅನಿವಾರ್ಯ ಕಾರಣಗಳಿಂದ ಹುದ್ದೆಗೆ ರಾಜೀನಾಮೆ ನೀಡಿದರು. ಆಗ ಶ್ರೀ ನಾರಾಯಣ ಅವರ ಸಲಹೆಯಂತೆ ಡಾ. ಗೊ.ರು.ಚ. ಅವರು ಪರಿಷತ್ತಿನ ಕಾರ್ಯದರ್ಶಿ ಹುದ್ದೆಯನ್ನು ವಹಿಸಿಕೊಂಡರು.

ಪ್ರೊ. ಜಿ.ಎಸ್. ಸಿದ್ಧಲಿಂಗಯ್ಯನವರ ಅಧ್ಯಕ್ಷ ಅವಧಿ ಮುಗಿದ ಮೇಲೆ ಯಾರನ್ನು ಅಧ್ಯಕ್ಷರನ್ನಾಗಿ ಮಾಡಬೇಕು ಎಂದು ಅಭಿಮಾನಿಗಳು ಶ್ರೀ ಜಿ.ನಾರಾಯಣ ಅವರ ನೇತೃತ್ವದಲ್ಲಿ ಬಂದು ಸಮನ್ವಯ ಸಮಿತಿ ರಚಿಸಿದರು. ಸಮಿತಿಯ ಒಟ್ಟು ಅಭಿಪ್ರಾಯ ದಂತೆ ಪರಿಷತ್ತಿನ ಒಳಹೊರಗುಗಳನ್ನು ಬಲ್ಲ ಡಾ. ಗೊ.ರು.ಚ. ಅವರನ್ನು ಅವಿರೋಧವಾಗಿ ಆಯ್ಕೆ ಮಾಡಬೇಕೆಂದು ತೀರ್ಮಾನಿಸಿದರು. ಆದರೆ ಅದು ಫಲ ನೀಡಲಿಲ್ಲ. ನಂತರ ನಡೆದ ಚುನಾವಣೆಯಲ್ಲಿ ಡಾ. ಗೊ.ರು.ಚ. ಅವರು ಬಹುಮತಗಳಿಂದ ಆಯ್ಕೆಯಾಗಿ ಪರಿಷತ್ತಿನ ಅಧ್ಯಕ್ಷ ಪೀಠವನ್ನು ಅಲಂಕರಿಸಿದರು.

ಡಾ. ಗೊ.ರು.ಚ. ಅವರು ಮೂರು ವರ್ಷಗಳ ತಮ್ಮ ಅಧಿಕಾರಾವಧಿಯಲ್ಲಿ ಅನೇಕ ಅರ್ಥಪೂರ್ಣ ಕಾರ್ಯಕ್ರಮಗಳನ್ನು ಹಮ್ಮಿಕೊಂಡರು. ಪರಿಷತ್ತಿನ ಸಮಸ್ಯೆಗಳ ಪರಿಹಾರಕ್ಕೆ ಆದ್ಯತೆ ನೀಡಿದರು. ಪರಿಷತ್ತಿನ ಆರ್ಥಿಕ ಸಂಕಷ್ಟದ ಬಗ್ಗೆ ಅರಿವಿದ್ದ ಅವರು ಆರ್ಥಿಕ ಸಂಪನ್ಮೂಲಗಳನ್ನು ಸಂಪನ್ಮೂಲಗಳನ್ನು ಕ್ರೋಢೀಕರಿಸಲು ನಾಡಿನಾದ್ಯಂತ ಪ್ರವಾಸ ಮಾಡಿ ಅಪಾರ ಪ್ರಮಾಣದ ಸಂಪನ್ಮೂಲಗಳನ್ನು ಸಂಗ್ರಹಿಸಿ, ವರ್ಷಕ್ಕೆ ಸುಮಾರು ಏಳೆಂಟು ಲಕ್ಷ ರೂಪಾಯಿಗಳ ಶಾಶ್ವತ ಆದಾಯ ಬರುವಂತೆ ಮಾಡಿದ್ದು, 'ಕಾವ್ಯ ಕಾವೇರಿ', 'ಗೀತ ಸಂಗೀತ'ದಂತಹ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಆರಂಭಿಸಿದ್ದು ಅವರ ಹೆಗ್ಗಳಿಕೆ.

ಪ್ರಥಮ ಬಾರಿಗೆ ತಾಂತ್ರಿಕ ಸಾಹಿತ್ಯ ಪ್ರಾತ್ಯಕ್ಷಿಕೆ, ವಿವಿಧ ಸಾಹಿತ್ಯ ಪ್ರಕಾರಗಳಿಗೆ ಸಂಬಂಧಿಸಿದಂತೆ ಹತ್ತಕ್ಕೂ ಹೆಚ್ಚು ರಾಜ್ಯಮಟ್ಟದ ಸಮಾವೇಶಗಳು, ನಾಡಗೀತೆಗಳ ಧ್ವನಿಸುರುಳಿಗಳ ನಿರ್ಮಾಣ, ನಿರಂತರ ಮಾಸಿಕ ಸಂಶೋಧನಾ ಉಪನ್ಯಾಸ ವ್ಯವಸ್ಥೆ, ಜಿಲ್ಲಾ ಘಟಕಗಳಿಗೆ ಆರ್ಥಿಕ ಸಂಪನ್ಮೂಲಗಳ ವ್ಯವಸ್ಥೆ, ಪಶ್ಚಿಮ ಬಂಗಾಳ, ಆಂಧ್ರ ಪ್ರದೇಶ ಮತ್ತು ಕೇರಳ ರಾಜ್ಯಗಳಲ್ಲಿ ಸಾಹಿತ್ಯ ವಿನಿಮಯ ವಿಚಾರ ಸಂಕಿರಣಗಳು, ಪ್ರಥಮ ಬಾರಿಗೆ ಬೆಂಗಳೂರಿನಿಂದ ಹೊರಗಡೆ ಪರಿಷತ್ತಿನ ಸರ್ವಸದಸ್ಯರ ಸಭೆ, ಸಮುದಾಯ ಸಾಹಿತ್ಯ ಮಾಲೆ ಪ್ರಕಟಣೆ ಆರಂಭ, ಕನ್ನಡ-ಕನ್ನಡ ನಿಘಂಟಿನ ಕಾರ್ಯ ಪೂರ್ಣಗೊಳಿಸಿದುದು - ಇದೆಲ್ಲಾ ಆದದ್ದು ಅವರು ಪರಿಷತ್ತಿನ ಅಧ್ಯಕ್ಷರಾಗಿದ್ದಾಗಲೇ. ಪ್ರಪ್ರಥಮ ಬಾರಿಗೆ ತಾಲ್ಲೂಕು ಘಟಕಗಳ ರಚನೆ ಮೊದಲಾದ ಅನೇಕ ಕಾರ್ಯಕ್ರಮಗಳನ್ನು



ಮುಖ್ಯಮಂತ್ರಿ ಎಸ್.ಎಂ. ಕೃಷ್ಣ ಅವರಿಂದ ೧೯೯೯ರ ರಾಜ್ಯೋತ್ಸವ ಪ್ರಶಸ್ತಿ ಪ್ರದಾನ. ಈ ಸಂದರ್ಭದಲ್ಲಿ ಕನ್ನಡ ಮತ್ತು ಸಂಸ್ಕೃತಿ ಸಚಿವೆ ಶ್ರೀಮತಿ ರಾಣಿ ಸತೀಶ್, ಕಾರ್ಯದರ್ಶಿ ಶ್ರೀ ಚಂದ್ರಹಾಸ ಗುಪ್ತ ಅವರು ಉಪಸ್ಥಿತರಿದ್ದರು

ಹಮ್ಮಿಕೊಂಡು ಯಶಸ್ವಿಗೊಳಿಸಿದ ಕೀರ್ತಿ ಡಾ. ಗೊ.ರು.ಚ. ಅವರಿಗೆ ಸಲ್ಲುತ್ತದೆ.

### ಜಾನಪದ ಅಕಾಡೆಮಿಯಲ್ಲಿ

ಜಾನಪದ ಕ್ಷೇತ್ರದಲ್ಲಿ ಇವರು ಸಲ್ಲಿಸಿದ ಅನುಪಮ ಸೇವೆಯನ್ನು ಗಮನಿಸಿದ ಸರ್ಕಾರ ಅವರನ್ನು ಎರಡು ಅವಧಿಗೆ ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಸದಸ್ಯರನ್ನಾಗಿ ಮಾಡಿತು. ನಂತರ ೨೦೦೮ ರಲ್ಲಿ ಅವರನ್ನೇ ಜಾನಪದ ಅಕಾಡೆಮಿಯ ಅಧ್ಯಕ್ಷರನ್ನಾಗಿ ಮಾಡಿತು. ಅವರು ಎಂದೂ ಅಧಿಕಾರಕ್ಕಾಗಿ ಆಸೆಪಟ್ಟವರಲ್ಲ. ಸ್ಥಾನಗಳೇ ಅವರನ್ನು ಹುಡುಕಿಕೊಂಡು ಬಂದವು.

ಮೊದಲಿನಿಂದಲೂ ಅವರಿಗಿದ್ದ ಬಹುದೊಡ್ಡ ಕನಸು ಜಾನಪದ ವಿಶ್ವವಿದ್ಯಾಲಯದ ಸ್ಥಾಪನೆ. ಆ ಪ್ರಯತ್ನದಲ್ಲಿ ಯಶಸ್ವಿಯಾಗಿ ಜಾನಪದ ಕ್ಷೇತ್ರದ ವಿವಿಧ ಪ್ರಕಾರಗಳ ಸಂಶೋಧನೆ, ಅಧ್ಯಯನ ಮೊದಲಾದವಕ್ಕೆ ಒಂದು ಭದ್ರಬುನಾದಿಯನ್ನು ಹಾಕಿದರು. ಜನಪದ ಕಲಾವಿದರ ಕ್ಷೇಮನಿಧಿಯನ್ನು ಸ್ಥಾಪಿಸಿ ತನ್ಮೂಲಕ ಸಂಕಷ್ಟದಲ್ಲಿರುವ ಕಲಾವಿದರಿಗೆ ಸಾಧ್ಯವಾದಷ್ಟು ನೆರವು ನೀಡುವ ಕಾರ್ಯಕ್ರಮವನ್ನು ರೂಪಿಸಿದರು. ಅಕಾಡೆಮಿ ಅಧ್ಯಕ್ಷರಾಗಿ ತಮಗೆ ಸಂದ ಗೌರವ ಸಂಭಾವನೆ, ಸಭಾಭತ್ಯೆಯನ್ನೆಲ್ಲ ಆ ನಿಧಿಗೇ ನೀಡಿದರು. ಅಕಾಡೆಮಿಯ ಅಧ್ಯಕ್ಷರಾಗಿ ಮಾಡಿದ ಅನುಪಮ ಸೇವೆಯನ್ನು ಮನಗಂಡ ಸರ್ಕಾರ ಅವಧಿ ವಿಸ್ತರಿಸಿ ಮುಂದುವರೆಯಲು ಕೇಳಿದಾಗ ನಯವಾಗಿಯೇ ನಿರಾಕರಿಸಿದರು.

### ಸಾಹಿತ್ಯ ಪರಿಚಾರಿಕೆ

ಡಾ. ಗೊ.ರು.ಚ. ಅವರು ತಮ್ಮ ಹೆಸರಿನಲ್ಲಿ ಬರೆದುದಕ್ಕಿಂತ ಬೇರೆಯವರಿಗೆ ಬರೆದುಕೊಟ್ಟದ್ದೇ ಹೆಚ್ಚು. ಅವರು ಅಧಿಕಾರಿಗಳಿಗೆ, ಸಚಿವರಿಗೆ ನೂರಾರು ಭಾಷಣಗಳನ್ನು ಬರೆದುಕೊಟ್ಟಿದ್ದಾರೆ ಅನೇಕಾನೇಕ ಪುಸ್ತಕಗಳಿಗೆ ಮುನ್ನುಡಿಗಳನ್ನು ಬರೆದಿದ್ದಾರೆ. ಬಾಗೂರು ನಾಗಮ್ಮ, ಜೋಗದ ಝೋಕ್, ಮೈದುನ ರಾಮಣ್ಣ, ಗ್ರಾಮ ಗೀತೆಗಳು ಈ ಜಾನಪದ ಸಂಗ್ರಹಗಳನ್ನು ಹೊರತಂದಿರುವ ಅವರು ನೆನಹು, ವಿಭೂತಿ (ರಾಜ್ಯ ಸರ್ಕಾರದ ಬಹುಮಾನಿತ ಕೃತಿ) ಹೊನ್ನಬಿತ್ತೇವು ಹೊಲಕೆಲ್ಲ, ಕರ್ನಾಟಕ ಜಾನಪದ ಕಲೆಗಳು, ಕಲ್ಯಾಣ, ಸಂಪ್ರೋಕ್ಷಣೆ, ದಾಸೋಹ, ರಾಷ್ಟ್ರರತ್ನ, ಕರ್ನಾಟಕ ಪ್ರಗತಿಪಥ, ಮೂಗುತಿ, ಕವಿಕಂಡ ಬಸವಣ್ಣ, ಕನ್ನಡ-ಕನ್ನಡಿಗ-ಕರ್ನಾಟಕ, ಗ್ರಾಮಜ್ಯೋತಿ, ಶರಣ ಕಿರಣ, ಸೇವಾ ಸಂಪದ, ದೇಶಮುದ್ರೆ, ಶರಣ ಸಂಪದ, ಮಾತೇ ಜ್ಯೋತಿರ್ಲಿಂಗ, ಸಾರ್ಥಕ, ಶರಣ ತತ್ತ್ವಚಿಂತನ, ಜನದನಿ, ನೂರೊಂದು ಚಿಂತನ, ನಿಜಬಿಂಬ, ಚಿತ್ರಸಂಪುಟ, ಇವುಗಳ ಜೊತೆಗೆ ೫೦ಕ್ಕೂ ಹೆಚ್ಚು ಸ್ಮರಣ ಸಂಚಿಕೆಗಳು ಇವರ ಸಂಪಾದಕತ್ವದಲ್ಲಿ ಬೆಳಕು ಕಂಡಿವೆ.

ಇಂಗ್ಲೀಷಿನಿಂದ ಕನ್ನಡಕ್ಕೆ ಅನುವಾದ ಕಲೆಯಲ್ಲಿ ಸಿದ್ಧಹಸ್ತರಾದ ಡಾ. ಗೊ.ರು.ಚ. 'ಸಮುದಾಯ ಅಭಿವೃದ್ಧಿ ಕುರಿತು ನೆಹರು', 'ಕರ್ನಾಟಕ', 'ಬಸವೇಶ್ವರ', 'ಭಾರತದಲ್ಲಿ ಸಮುದಾಯ ಅಭಿವೃದ್ಧಿ ವಿಕಾಸ', 'ಅಮೇರಿಕಾದಲ್ಲಿ ಆಧುನಿಕ ಹೈನುಗಾರಿಕೆ', 'ಚೆಗೆವಾರ', 'ಇಂದು ಇಲ್ಲಿದೆ-ನಾಳೆ ಹೋಗಿದೆ', 'ಮನಬಯಸಿದ ಮರಣ', 'ದಿವ್ಯಜ್ಯೋತಿ' 'ಕನ್ನಡ ಶಾಸ್ತ್ರೀಯ ಭಾಷಾ ವರದಿ' - ಇತ್ಯಾದಿ ಕೃತಿಗಳನ್ನು ಭಾಷಾಂತರಿಸಿದ್ದಾರೆ.

ಅವರ ಸ್ವತಂತ್ರ ಕೃತಿಗಳಲ್ಲಿ ಮುಖ್ಯವಾದವು ಸಂದರ್ಭ, ಗೊಂಡೇದಹಳ್ಳಿಯಿಂದ ಬೆಂಗಳೂರಿಗೆ (ಆತ್ಮಕಥನ), ಸಾಕ್ಷಿಕಲ್ಲು, ಬೆಳ್ಳಕ್ಕಿ ಹಿಂಡು ಬೆದರ್‍ಯಾವು, ಅಯ್ಯನಕೆರೆ, ನಿಜಲಿಂಗಪ್ಪ ಸದಾಶಿವ ಶಿವಾಚಾರ್ಯರು, ಅಕ್ಕಮಹಾದೇವಿ, ಶರಣಾರ್ಥಿ, ಆಲೋಚನೆ, ಚಿಗಟೇರಿ ಮುರಿಗಪ್ಪ, ಅನುಭಾವ, ನೇತ್ರದಾನಿ ಮೋದಿ, ಅಲ್ಲಲ್ಲಿ ನುಡಿದದ್ದು, ಕಂತೆ ಭಿಕ್ಷೆ, ಆಡಿದ ಮಾತುಗಳು, ನೆತ್ತಿಯ ಬುತ್ತಿ, ಹಾರೈಕೆ, ನಲ್ನುಡಿ ಇತ್ಯಾದಿ. ಸಾಂದರ್ಭಿಕವಾಗಿ ಕೆಲವು ವಚನಗಳು ಮತ್ತು ಕವನಗಳನ್ನೂ ರಚಿಸಿದ್ದಾರೆ ಕೂಡ.

ವಸ್ತು, ವಿಷಯ ಯಾವುದೇ ಇರಲಿ, ಅದನ್ನು ಸಮರ್ಥವಾಗಿ, ಸಮರ್ಪಕವಾಗಿ ಮನಮುಟ್ಟುವಂತೆ ಪರಿಚಯ ಮಾಡಿಕೊಡುವ ಕಲೆ ಅವರಿಗೆ ಕರಗತವಾಗಿದೆ. ಪುಟ್ಟ ಪುಟ್ಟ ವಾಕ್ಯಗಳು, ಸಂದರ್ಭಕ್ಕೆ ಅನಿವಾರ್ಯ ಎಂಬಂತೆ ಕೂಡಿಬರುವ ಪ್ರಾಸ, ಅನುಪ್ರಾಸಗಳು ಅವರ ಬರವಣಿಗೆಯ ಅಂದವನ್ನು ಹೆಚ್ಚಿಸಿವೆ. ಸಾಹಿತ್ಯದ ಒಂದು ಪ್ರಕಾರದಲ್ಲಿ ಪರಿಪೂರ್ಣತೆಯನ್ನು ಸಾಧಿಸುವುದು ಕಷ್ಟವಾಗಿರುವಾಗ ಇವರು ಹಲವಾರು ಪ್ರಕಾರಗಳಲ್ಲಿ ಯಶಸ್ಸು ಸಾಧಿಸಿರುವುದು ಅವರಲ್ಲಿರುವ ಪ್ರತಿಭೆಯ ದ್ಯೋತಕ. ಮುದ್ರಣ, ವಿನ್ಯಾಸ ದೃಷ್ಟಿಯಿಂದ ಪುಸ್ತಕಗಳು ಹೇಗಿರಬೇಕು ಎಂಬುದಕ್ಕೆ ಇವರು ಸಂಪಾದಿಸಿರುವ ಕೃತಿಗಳು ಉದಾಹರಣೆಯಾಗಿದೆ.

### ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾಗಿ

ಕನ್ನಡದ ಅಮೂಲ್ಯ ಭಂಡಾರವೆನಿಸಿದ ಶರಣ ಸಾಹಿತ್ಯ, ಸಂಸ್ಕೃತಿ, ಕಲೆ ಇವುಗಳ ಸಂರಕ್ಷಣೆ, ಸಂಶೋಧನೆ, ಸಂವರ್ಧನೆ ಮತ್ತು ಪ್ರಕಟಣೆಗಳಿಗಾಗಿ ಹಾಗೂ ಶರಣರ ದಿವ್ಯಸಂದೇಶವನ್ನು ನಾಡಿನ, ರಾಷ್ಟ್ರದ ಮುಂದಿನ ಪೀಳಿಗೆಗೆ ಮುಟ್ಟಿಸುವ ಸದುದ್ದೇಶದ ಸಲುವಾಗಿ ಪ್ರಾತಿನಿಧಿಕ ಸಂಸ್ಥೆಯೊಂದರ ಅಗತ್ಯವನ್ನು ಮನಗಂಡ ಪರಮಪೂಜ್ಯ ಸುತ್ತೂರು ಜಗದ್ಗುರು ಡಾ. ಶ್ರೀ ಶಿವರಾತ್ರಿ ರಾಜೇಂದ್ರ ಮಹಾಸ್ವಾಮಿಗಳವರು ತಮ್ಮ ಪಟ್ಟಾಧಿಕಾರದ ಅಮೃತ







ಶ್ರೀ ಸುತ್ತೂರು ಜಗದ್ಗುರು ಶ್ರೀ ಶ್ರೀ ಶಿವರಾತ್ರೀ ದೇಶೀಕೇಂದ್ರ ಮಹಾಸ್ವಾಮಿಗಳು, ಸಿರಿಗೆರೆ ತರಳಬಾಲು ಬೃಹನ್ಮಠದ ಜಗದ್ಗುರು ಡಾ. ಶ್ರೀ ಶ್ರೀ ಶಿವಮೂರ್ತಿ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯಸಾನ್ನಿಧ್ಯದಲ್ಲಿ ಬೆಂಗಳೂರು ರವೀಂದ್ರ ಕಲಾಕ್ಷೇತ್ರದಲ್ಲಿ ೨೦ ಜುಲೈ ೨೦೧೪ ರಂದು ನಡೆದ ಗೊ.ರು.ಚ. ಅಭಿನಂದನಾ ಸಮಾರಂಭದಲ್ಲಿ ಗೊ.ರು.ಚ ದಂಪತಿಗಳಿಗೆ ಸನ್ಮಾನ.
ಈ ಸಂದರ್ಭದಲ್ಲಿ ಕೇಂದ್ರ ಸಚಿವರಾದ ಶ್ರೀ ಡಿ.ವಿ. ಸದಾನಂದಗೌಡ, ಮಾಜಿ ಮುಖ್ಯಮಂತ್ರಿ ಶ್ರೀ ಬಿ.ಎಸ್. ಯಡಿಯೂರಪ್ಪ, ಸಚಿವರಾದ ಶ್ರೀ ಹೆಚ್.ಎ. ಪಾಟೀಲ್, ಶ್ರೀ ಎಂ.ವಿ. ರಾಜಶೇಖರನ್, ಪ್ರಖ್ಯಾತ ಕವಿ ಡಾ. ಚನ್ನವೀರ ಕಣವಿ ಮೊದಲಾದ ಗಣ್ಯರು ಉಪಸ್ಥಿತರಿದ್ದರು

ಮಹೋತ್ಸವದ ಶುಭ ಸಂದರ್ಭದಲ್ಲಿ ಆಗಸ್ಟ್ ೨೯, ೧೯೮೬ ರಂದು ಸ್ಥಾಪಿಸಿದ ರಾಷ್ಟ್ರಮಟ್ಟದ ಮಹಾಸಂಸ್ಥೆ ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು. ಪರಮಪೂಜ್ಯ ಜಗದ್ಗುರುಗಳು ಈ ನಾಡಿಗೆ ನೀಡಿದ ಅಮೂಲ್ಯ ಕೊಡುಗೆಗಳಲ್ಲಿ ಈ ಸಂಸ್ಥೆಯ ಸ್ಥಾಪನೆ ಮಹತ್ವಪೂರ್ಣವಾದದ್ದು.

ಪರಿಷತ್ತಿನ ಪ್ರಥಮ ಅಧ್ಯಕ್ಷರಾಗಿ ಉದ್ದಾಮ ಸಾಹಿತಿಗಳೂ, ಶರಣಸಾಹಿತ್ಯ ಕ್ಷೇತ್ರಕ್ಕೆ ಅಮೂಲ್ಯ ಕೊಡುಗೆಯನ್ನು ನೀಡಿದವರೂ ಆದ ಡಾ. ಎಚ್. ತಿಪ್ಪೇರುದ್ರಸ್ವಾಮಿಯವರು ನೇಮಕಗೊಂಡರು. ಅನಾರೋಗ್ಯದಿಂದ ಬಳಲುತ್ತಿದ ಡಾ. ತಿಪ್ಪೇರುದ್ರಸ್ವಾಮಿಗಳು ಲಿಂಗೈಕ್ಯರಾದ ಮೇಲೆ ತೆರವಾದ ಆ ಸ್ಥಾನವನ್ನು ತುಂಬಲು ಶ್ರೀ ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳವರ ಗಮನಕ್ಕೆ ಬಂದದ್ದು ಡಾ. ಗೊ.ರು.ಚ. ಡಾ. ಗೊ.ರು.ಚ. ಅವರು ೧೯೯೪ನೇ ಜುಲೈ ೨ ರಂದು ಅಧ್ಯಕ್ಷ ಸ್ಥಾನದ ಹೊಣೆಗಾರಿಕೆಯನ್ನು ವಹಿಸಿಕೊಂಡರು. ಅವರು ಅಧಿಕಾರವನ್ನು ವಹಿಸಿಕೊಂಡ ನಂತರ ಮೊದಲು ಮಾಡಿದ ಕೆಲಸವೆಂದರೆ ಪರಿಷತ್ತಿನ ಧ್ಯೇಯೋದ್ದೇಶಗಳಿಗನುಗುಣವಾಗಿ ಒಂದು ಕ್ರಿಯಾಯೋಜನೆಯನ್ನು ಸಿದ್ಧಪಡಿಸಿದುದು. ಡಾ. ಗೊರು.ಚ. ಅವರು ಪರಿಷತ್ತಿನ ಅಧ್ಯಕ್ಷರಾಗಿ ೨೧ ವರ್ಷಗಳ ಮೇಲಾಗಿದೆ. ಈ ಸುದೀರ್ಘ ಪಯಣದಲ್ಲಿ ಸಾಧನೆಯ ಮೈಲಿಗಲ್ಲುಗಳನ್ನು ನೆಡುತ್ತಾ ಅಭಿವೃದ್ಧಿಯ ಹಾದಿಯಲ್ಲಿ ಮುನ್ನಡೆಸುತ್ತಾ ಬಂದು ಸಮಸ್ತ ಶರಣಾಭಿಮಾನಿಗಳ ಪ್ರೀತಿ ಗೌರವಕ್ಕೆ ಪಾತ್ರರಾಗಿದ್ದಾರೆ.

ಅವರು ಅಧ್ಯಕ್ಷರಾದ ಮೇಲೆ ಪರಿಷತ್ತಿನ ಚಟುವಟಿಕೆಗಳನ್ನು ಜಿಲ್ಲಾ ಮಟ್ಟ ಹಾಗೂ ತಾಲ್ಲೂಕು ಮಟ್ಟಗಳಿಗೆ ವಿಸ್ತರಿಸಿ ನಿರಂತರವಾಗಿ ಒಂದಲ್ಲ ಒಂದು ಕಾರ್ಯಕ್ರಮವನ್ನು ಕ್ಷೇತ್ರ ಘಟಕಗಳ ಮೂಲಕ ನಡೆಯುವಂತೆ ಮಾಡಿದುದು, ಕರ್ನಾಟಕಕ್ಕಷ್ಟೇ ಸೀಮಿತವಾಗಿರದೆ ನೆರೆಯ ಆಂಧ್ರ ಪ್ರದೇಶ, ತಮಿಳುನಾಡು, ಮಹಾರಾಷ್ಟ್ರ ರಾಜ್ಯಗಳಲ್ಲೂ ಪರಿಷತ್ತಿನ ಕ್ಷೇತ್ರಘಟಕಗಳನ್ನು ರಚಿಸಿ, ಕಾರ್ಯ ಚಟುವಟಿಕೆಗಳು ಪರಿಣಾಮಕಾರಿಯಾಗಿ ನಡೆಯುವಂತೆ ಮಾಡಿದುದು ಅವರ ಧೀಶಕ್ತಿಗೆ ಹಿಡಿದ ಕನ್ನಡಿ.

ಜನರಲ್ಲಿ ಶರಣರ ಬಗ್ಗೆ, ಅವರ ಚಿಂತನೆಗಳ ಬಗ್ಗೆ ಅರಿವು ಮೂಡಿಸಲು ಗ್ರಂಥ ಪ್ರಕಟಣೆಗೆ ಮುಂದಾದರು. ಪರಿಷತ್ತಿನ ಆರ್ಥಿಕ ಇತಿಮಿತಿಯಲ್ಲಿಯೂ ವಿದ್ವಾಂಸರು ಬರೆದ ಸುಮಾರು ೮೦ಕ್ಕೂ ಹೆಚ್ಚು ಮೌಲಿಕ ಕೃತಿಗಳನ್ನು

ಪ್ರಕಟಿಸಿ ಜನಸಾಮಾನ್ಯರೂ ಕೊಳ್ಳುವಂತೆ ಕಡಿಮೆ ಬೆಲೆಗೆ ದೊರೆಯುವಂತೆ ಮಾಡಿ, ಶರಣ ಸಂಸ್ಕೃತಿಯ ಪ್ರಸಾರವನ್ನು ಮಾಡುತ್ತಾ ಬಂದಿದ್ದಾರೆ. ಕನ್ನಡ ಪ್ರಕಟಣೆಗಳ ಜೊತೆಗೆ ಅನ್ಯಭಾಷಿಕರಿಗೆ ಶರಣರ ಸಂದೇಶದ ಜೀವನ ಮೌಲ್ಯಗಳನ್ನು ಅರ್ಥಮಾಡಿಸುವ ದೃಷ್ಟಿಯಿಂದ ಇಂಗ್ಲೀಷ್, ಹಿಂದಿ, ತೆಲುಗು, ತಮಿಳು ಭಾಷೆಗಳಲ್ಲಿಯೂ ಕೃತಿಗಳನ್ನು ಪ್ರಕಟಿಸಿದ ಕೀರ್ತಿಗೆ ಭಾಜನರಾಗಿದ್ದಾರೆ. ಚಿಕ್ಕಮಗಳೂರು, ಬೆಳಗಾವಿ, ರಾಯಚೂರು, ಬಾಗಲಕೋಟೆ, ಗದಗ, ಭಾಲ್ಕಿ, ಮುಂಬೈ, ಧಾರವಾಡಗಳಲ್ಲಿ ಅಖಿಲ ಭಾರತ ಶರಣ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದ್ದಾರೆ.

ಶರಣ-ಶರಣೆಯರ ಆಯ್ದ ವಚನಗಳನ್ನು ಜನರಿಗೆ ಮುಟ್ಟಿಸುವ ಸದುದ್ದೇಶದಿಂದ ಸುಪ್ರಸಿದ್ಧ ಗಾಯಕ-ಗಾಯಕಿಯರ ಸಿರಿಕಂಠದಿಂದ ಹಾಡಿಸಿ, ಜಗದಗಲ ಮುಗಿಲಗಲ, ಕದಳಿ, ಉರಿಯುಂಡ ಕರ್ಪೂರ, ನೆಲದ ಮರೆಯ ನಿಧಾನ ಧ್ವನಿಸುರುಳಿಗಳನ್ನು ಹೊರತಂದಿದ್ದಾರೆ. ಅವೆಲ್ಲವೂ ಜನಮನ್ನಣೆಯನ್ನು ಗಳಿಸಿವೆ.

ಗೊ.ರು.ಚ. ಅವರು ಸಾಹಿತ್ಯ ನೀಡಿ, ಲಿಂಗದೇವರು ನಿರ್ದೇಶಿಸಿದ ಮೇದಾರಕೇತಯ್ಯ, ಘಟ್ಟಿವಾಳಯ್ಯ, ಸಕಲೇಶ ಮಾದರಸ ಮತ್ತು ಜೇಡರ ದಾಸಿಮಯ್ಯ ದೂರದರ್ಶನ ಚಿತ್ರಗಳು ಬಿತ್ತರವಾಗಿ ಕನ್ನಡಿಗರ ಮನಸ್ಸನ್ನು ಆಕರ್ಷಿಸುವಂತೆ ಮಾಡುವಲ್ಲಿ ಯಶಸ್ವಿಯಾಗಿದ್ದಾರೆ.

ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ರಾಜ್ಯದ ಬೇರೆ ಬೇರೆ ಜಿಲ್ಲೆಗಳಲ್ಲಿ ಮಹಿಳಾ ಚಟುವಟಿಕೆಗಳಿಗೆ ಮೀಸಲಾದ 'ಕದಳಿ ಮಹಿಳಾ ವೇದಿಕೆ' ರಚನೆಯಾಗಿದ್ದು, ಆ ವೇದಿಕೆ ಶರಣ ಸಂಸ್ಕೃತಿಗೆ ಪೋಷಕ ಹಾಗೂ ಪೂರಕವಾದ ಹಲವಾರು ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಡಾ. ಗೊ.ರು.ಚ. ಅವರ ಮಾರ್ಗದರ್ಶನದಲ್ಲಿ ಪ್ರಗತಿಯತ್ತ ನಡೆಸಿಕೊಂಡು ಬರುತ್ತಿದೆ.

## ಪ್ರಶಸ್ತಿ ಪುರಸ್ಕಾರಗಳ ಮಾಲೆ

ನಿಸ್ವಾರ್ಥ ಸೇವೆ ಮಾಡಿದಾಗ ಸಮಾಜದ ಅನೇಕ ಸಂಘ ಸಂಸ್ಥೆಗಳು, ಮಠ ಮಾನ್ಯಗಳು ಗುರುತಿಸಿ ಸನ್ಮಾನ, ಪ್ರಶಸ್ತಿ ನೀಡಿ ಗೌರವಿಸುತ್ತಿವೆಂಬುದಕ್ಕೆ ಡಾ. ಗೊ.ರು.ಚ. ಅವರು ನಮ್ಮ ಕಣ್ಮುಂದೆ ಇರುವ ನಿದರ್ಶನ.

ಗೊ.ರು.ಚ. ಅವರಿಗೆ ಕೀರ್ತಿ, ಪ್ರಶಸ್ತಿಗಳು ದಿನ ಬೆಳಗಾಗುವುದರೊಳಗೆ ಬರಲಿಲ್ಲ. ಸುಮಾರು ೪೫ ವರ್ಷಗಳ ಸುದೀರ್ಘ ಸೇವೆ ಅವರಿಗೆ ಕೀರ್ತಿ, ಗೌರವಗಳನ್ನು ತಂದುಕೊಟ್ಟಿದೆ. ಪ್ರಶಸ್ತಿಗಳು ಬಂದಾಗ ಅವರು ಹಿಗ್ಗಲಿಲ್ಲ. ಎಲ್ಲವನ್ನೂ ಸಮಚಿತ್ತದಿಂದ ನಿರ್ಮಲ ಮನಸ್ಸಿನಿಂದ ವಿನಯಪೂರ್ವಕವಾಗಿ ಸ್ವೀಕರಿಸಿದರು. ಜಾನಪದ ಮತ್ತು ಯಕ್ಷಗಾನ ಅಕಾಡೆಮಿ ಪ್ರಶಸ್ತಿ (೧೯೯೪), ನ್ಯೂ ಇಂಗ್ಲೆಂಡ್ ಕನ್ನಡ ಕೂಟ ಪ್ರಶಸ್ತಿ (೧೯೯೪), ನಾಟಕ ಅಕಾಡೆಮಿ ಗೌರವ ಪ್ರಶಸ್ತಿ (೧೯೯೬), ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ (೧೯೯೯), ರೋಟರಿ ಗೌರವ ಸದಸ್ಯತ್ವ (೧೯೯೯), ಕೆಳದಿ ಶಿವಪ್ಪನಾಯಕ ಪ್ರಶಸ್ತಿ (೨೦೦೬), ಪ್ರೊ. ಸಂ.ಶಿ. ಭೂಸನೂರ ಮಠ ಪ್ರಶಸ್ತಿ (೨೦೦೮), 'ಆಳ್ವಾಸ್ ನುಡಿಸಿರಿ ಪ್ರಶಸ್ತಿ' (೨೦೦೮), ಶಿವಕುಮಾರ ಶ್ರೀ ಪ್ರಶಸ್ತಿ (೨೦೧೦), ಭಾಲ್ಕಿ ಚನ್ನಬಸವ ಪಟ್ಟದೇವರ ಪ್ರಶಸ್ತಿ (೨೦೧೨), ಚಿಂದೋಡಿ ವೀರಪ್ಪ ರಂಗ ಪ್ರಶಸ್ತಿ (೨೦೧೩), ಕೇಂದ್ರ ಸಂಗೀತ ನಾಟಕ ಪ್ರಶಸ್ತಿ (೨೦೧೩), ಕೆಂಪೇಗೌಡ ಪ್ರಶಸ್ತಿ (೨೦೧೩), ಮತ್ತು ಜಾನಪದ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ (೨೦೧೫) ಮೊದಲಾದ ಪ್ರಶಸ್ತಿಗಳು ಅವರಿಗೆ ಸಂದಿವೆ.

ಅವರು ಜಾನಪದ ಮತ್ತು ಸಾಹಿತ್ಯ ಕ್ಷೇತ್ರದಲ್ಲಿ ಸಲ್ಲಿಸಿದ ಗಣನೀಯ ಸೇವೆಗೆ ಮನ್ನಣೆಯಾಗಿ ಚಿಕ್ಕಮಗಳೂರಿನ ಸಾಹಿತ್ಯಾಭಿಮಾನಿಗಳು ಚಿಕ್ಕಮಗಳೂರು ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನಾಧ್ಯಕ್ಷರನ್ನಾಗಿ ಮಾಡಿ ಗೌರವ ಸಲ್ಲಿಸಿದರೆ, ಕರ್ನಾಟಕ ವಿಶ್ವವಿದ್ಯಾಲಯ ದಾಂಡೇಲಿಯಲ್ಲಿ ನಡೆದ ಅಖಿಲ ಕರ್ನಾಟಕ ಜಾನಪದ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿದೆ. ಅವರ ಅಂದಿನ ಅಧ್ಯಕ್ಷ ಭಾಷಣ ಜಾನಪದ ಕ್ಷೇತ್ರದ ಶ್ರೀಮಂತಿಕೆ ಸತ್ವಗಳನ್ನು ತಿಳಿಸಿಕೊಟ್ಟ ವಿದ್ವತ್‌ಪೂರ್ಣ ಭಾಷಣ. ನೇಪಾಳದ ರಾಜಧಾನಿ ಕಠ್ಮಂಡುವಿನಲ್ಲಿ ನಡೆದ ಅಖಿಲ ಭಾರತ ಕನ್ನಡ ಸಂಸ್ಕೃತಿ ಸಮ್ಮೇಳನಾಧ್ಯಕ್ಷತೆ ವಹಿಸಿದ್ದ ಗೌರವ ಅವರದು.

ಡಾ. ಗೊ.ರು.ಚ. ಅವರು ಕಳೆದ ಐವತ್ತು ವರ್ಷಗಳಿಂದ ಶ್ರೀ ಸಿದ್ಧಗಂಗಾ ಮಠದ ಬಗ್ಗೆ, ಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬಗ್ಗೆ ಅಪಾರವಾದ ಶ್ರದ್ಧಾ ಭಕ್ತಿಯನ್ನಿಟ್ಟುಕೊಂಡು ಬಂದಿದ್ದಾರೆ. ಶ್ರೀಮಠಕ್ಕೆ ಸಂಬಂಧಿಸಿದ ಸಾಕ್ಷ್ಯಚಿತ್ರವು ಸೇರಿದಂತೆ ಹಲವಾರು ಬೃಹತ್ ಸಮಾರಂಭಗಳು ಯಶಸ್ವಿಯಾಗಿ ನಡೆಯಲು ಸಲಹೆ, ಸೂಚನೆಗಳನ್ನು ನೀಡುವುದರ ಜೊತೆಗೆ ಸಕ್ರಿಯವಾಗಿ ಭಾಗವಹಿಸುತ್ತಾ ಬಂದಿದ್ದಾರೆ. ಇದೇ ಮೇ ೧೮ಕ್ಕೆ ೮೬ ವಸಂತಗಳ ಬೇವು-ಬೆಲ್ಲವನ್ನು ಸವಿದು ೮೭ನೇ ವಸಂತಕ್ಕೆ ಪದಾರ್ಪಣೆ ಮಾಡುತ್ತಿರುವ ಶುಭ ಸಂದರ್ಭದಲ್ಲಿ ಹೃತ್ಪೂರ್ವಕ ಶುಭಾಶಯಗಳನ್ನು ಹಾಗೂ ರಾಷ್ಟ್ರೀಯ ಬಸವ ಪುರಸ್ಕಾರ ಪ್ರಶಸ್ತಿ ಪಡೆದಿರುವುದಕ್ಕೆ 'ಸಿದ್ಧಗಂಗಾ' ಅಭಿನಂದನೆಗಳನ್ನು ಸಲ್ಲಿಸುತ್ತದೆ. ಅವರಿಂದ ನಾಡು-ನುಡಿಗೆ ಮತ್ತಷ್ಟು ಕಾಲ ಸೇವೆ ಸಲ್ಲಿಸುವಂತಾಗಲಿ ಎಂದು ಹಾರೈಸುತ್ತದೆ.





# ಭಕ್ತಿ ಸುಭಾಷೆಯ ನುಡಿ

– ಲಿಂ. ಡಾ. ಮಲ್ಲಿಕಾರ್ಜುನ ಎಸ್. ಲಠ್ಠೆ *

ನಮ್ಮ ವಿಶಾಲ ದೇಶ, ಹಳ್ಳಿಗಳೇ ಹೆಚ್ಚಾಗಿರುವ ಭಾರತ ದೇಶ. ಸಾಫ್ಟ್‌ವೇರ್‌ದಲ್ಲಿಯೂ ಭಾರತೀಯರಾದ ನಾವೇ ಮೇಲುಗೈ ಸಾಧಿಸುತ್ತಲಿದ್ದೇವೆ. ಆದರೆ ನಮ್ಮದೇ ಆದ ಭಾರತೀಯ ಸಂಸ್ಕೃತಿ ಯನ್ನು ಮರೆಯುತ್ತಲಿದ್ದೇವೆ. ಧನ-ಕನಕ-ವಸ್ತ್ರಗಳಿಂದ ಶ್ರೀಮಂತ ರಾಗುವ ವಿದ್ಯೆಯ ಕಡೆಗೆ ಲಕ್ಷ್ಯಗೊಡುತ್ತ ಮನುಷ್ಯತ್ವವನ್ನೇ ದುಡ್ಡಿಗಾಗಿ ಮಾರಿಕೊಳ್ಳುತ್ತಲಿದ್ದೇವೆ. ಹೀಗಾಗದಂತೆ ನಾವು ಮೊದಲು ಭಾರತೀಯರು ಎಂಬುದನ್ನು ಮನಗಾಣಬೇಕು. ಸತ್ಯ, ಸಮಾನತೆ ಸಹಕಾರ, ದಯಾಗುಣಗಳನ್ನು ಆಚಾರ-ವಿಚಾರಗಳನ್ನು ಉದಾತ್ತೀಕರಿಸಿಕೊಂಡು ಹೃದಯ ಶ್ರೀಮಂತಿಕೆಯನ್ನು ಬೆಳೆಸಿ ಕೊಳ್ಳುವುದಾಗಬೇಕು. ಭಾರತೀಯರಾದ ನಮ್ಮದು ಅಹಿಂಸಾ ಪರಮೋ ಧರ್ಮಃ, ದಯವೇ ಧರ್ಮದ ಮೂಲ, ಆಚಾರವೇ ಸ್ವರ್ಗ, ಸತ್ಯವ ನುಡಿವುದೇ ಸ್ವರ್ಗಲೋಕ, ಕಾಯಕವೇ ಕೈಲಾಸ. ಇಂಥ ಪರಿಸರದಲ್ಲಿ ಬೆಳೆದು ಬರುವ ಉದಾತ್ತ ಸಂಸ್ಕೃತಿ ಹೊಂದಿದವರು ನಾವು.

ಪಾಶ್ಚಾತ್ಯ ಸಂಸ್ಕೃತಿಯ ಅಟ್ಟಹಾಸಕ್ಕೆ ಮರುಳಾಗಿ, ಇಂಗ್ಲಿಷ್ ಭಾಷೆಯ ವ್ಯಾಮೋಹಕ್ಕೆ ಸಿಲುಕಿ, ನಾವು ಭಾರತೀಯರು ಮಡಿಯ ಬೆಡಗನ್ನೂ ಸಂಸ್ಕೃತಿಯ ಕೆಚ್ಚನ್ನೂ ಉಳಿಸಿಕೊಳ್ಳದಂತಾಗಿದ್ದೇವೆ. ಮುಸಲ್ಮಾನರ, ಬ್ರಿಟಿಷ್‌ರ ದುರಾಡಳಿತದಿಂದಾಗಿ ನಮ್ಮ ಸಂಸ್ಕೃತಿ ಅದು ಸತ್ವಹೀನವಾದಂತಾಗಿದೆ. ಹಾಗಾಗದಂತೆ ಎಚ್ಚರವಹಿಸಿ ಮೈತುಂಬ ಕಣ್ಣುಳ್ಳವರಾಗಿ ನಮ್ಮ ಹಿರಿಯರು ಹಾಕಿಕೊಟ್ಟ ಜೀವನದ ಮಹಾಮೌಲ್ಯಗಳನ್ನು ಮೆಲಕು ಹಾಕುವಂತಾಗಬೇಕು. ಇಂದಿನ ಕಲುಷಿತ ಮಾನವ ಸಮಾಜದ ಶುದೀಕರಣಕ್ಕೆ ಹನ್ನೆರಡನೆಯ ಶತಮಾನದಲ್ಲಿ ಆಗಿಹೋಗಿರುವ ಶಿವಶರಣರು ಸಾರಿರುವ ತತ್ವ ಸಿದಾಂತಗಳು ಪರಿಣಾಮಕಾರಿಯಾದ ದಿವ್ಯ ಔಷಧವಾಗಿರುತ್ತವೆ. 'ಅವು ಅಧರಕ್ಕೆ ಕಹಿಯಾದರೂ ಉದರಕ್ಕೆ ಸಿಹಿ, ಕೂಡಲ ಸಂಗನ ಶರಣರ ವಚನ ಬೇವ ಸವಿದಂತೆ'.

ಮಾನವನ ಮಹೋನ್ನತ ವ್ಯಕ್ತಿತ್ವ ನಿರ್ಮಾಣಕ್ಕಾಗಿ, ಸಮಾಜದ ಸರ್ವತೋಮುಖದ ಅಭಿವೃದ್ದಿಗಾಗಿ, ಭಕ್ತಿಭಂಡಾರಿ ಬಸವಣ್ಣ ನವರು ಶಿವಶರಣರಿಗೆಲ್ಲ ಕೇಂದ್ರವ್ಯಕ್ತಿಯಾಗಿ ಹನ್ನೆರಡನೆಯ ಶತಮಾನದಲ್ಲಿ ಕರ್ನಾಟಕದ ಕಲ್ಯಾಣ ಪಟ್ಟಣದಲ್ಲಿ ಮಹಾಕ್ರಾಂತಿ ಯನ್ನೇ ಕೈಕೊಂಡರು. ಎಲ್ಲ ಜಾತಿ-ಜನಾಂಗದ, ಕುಲ-ಕಸುಬಿನ, ಮೇಲು-ಕೀಳು ಕಾಯಕದ ಜನರೆಲ್ಲರೂ ಸ್ತ್ರೀಪುರುಷರೆಂಬ ಭೇದವೆಣಿಸದೆ ಸರ್ವರನ್ನೂ ಸಮಾನದೃಷ್ಟಿಯಿಂದ ಕಂಡವರೆಂದರೆ ಬಸವಣ್ಣನವರು.

ಬಸವಣ್ಣನವರು ಕಲಚೂರಿಯ ದೊರೆ ಬಿಜ್ಜಳನ ಪ್ರಧಾನಿಯಾಗಿದ್ದರು. ಬಸವಣ್ಣನವರು ಸದುವಿನಯವೆ ಸದಾಶಿವನ ಒಲುಮೆಯೆಂದರು. 'ನಾರಿಗೆ ಗುಣವೆ ಶೃಂಗಾರ' ಎಂದರು. 'ಸತ್ಯವ ನುಡಿವುದೆ ಸ್ವರ್ಗಲೋಕ, ಎಂದಂದು 'ಮಿಥ್ಯವ ನುಡಿವುದೆ ಮರ್ತ್ಯಲೋಕ'ವೆಂದೂ ಕರೆದರು. 'ಲೋಕದ ಡೊಂಕ ನೀವೇಕೆ ತಿದ್ದುವಿರಿ ? ನಿಮ್ಮ ನಿಮ್ಮ ತನುವ ಸಂತೈಸಿಕೊಳ್ಳಿ' ಎಂದು ಉಪದೇಶ ಮಾಡಿದರು. ಗುರು, ಲಿಂಗ, ಜಂಗಮ ಯಾರೇ ಇರಲಿ ಎಲ್ಲರಿಗೂ ಕಾಯಕ ಕಡ್ಡಾಯವೆಂದು, ಕಾಯಕವೇ ಕೈಲಾಸ ಎಂದೂ ಸಾರಿದರು.

ಹೊಟ್ಟೆಗೆ ಅನ್ನ, ತೊಡಲು ಬಟ್ಟೆ, ವಾಸಮಾಡಿ ಕೊಂಡಿರಲು ಮನೆಯು, ಮನೆಯಾದರೆ ಮನೆಯೊಡತಿ, ಮನೆಯಾಕೆಯಾದ (ಹೆಂಡತಿ) ಮೇಲೆ ಮಕ್ಕಳು, ಮಕ್ಕಳಾದರೆ ಬದುಕಿನ, ಬದುಕಾದರೆ ಕೇಡಿನ - ಇಂತಹ ಹಲವಾರು ಚಿಂತೆಗಳ ಸರಮಾಲೆಯಲ್ಲಿ ಜೀವ ಸವೆಸುವ ಪ್ರಾಪಂಚಿಕ ಮನುಷ್ಯರಿಗೆ ಚಿಂತೆಗಳ ಪರಿಹಾರಕ್ಕಾಗಿ ಶಿವಶರಣರು ಕಾಯಕ ಸಿದಾಂತವನ್ನು ಸಾರಿರುವುದು ಅದ್ಭುತ ಕೊಡುಗೆಯಾಗಿರುವುದು.

'ಕಾಯಕ' ಎಂದರೆ ಸಾಮಾನ್ಯವಾಗಿ ದೇಹಶ್ರಮ ಎಂದರ್ಥ. ಶರಣರು ಇದನ್ನು ಆರ್ಥಿಕ, ಸಾಮಾಜಿಕ ಹಾಗೂ ಆಧ್ಯಾತ್ಮಿಕ ಈ ತ್ರಿವೇಣಿ ಸಂಗಮದಲ್ಲಿ ಅದ್ದಿ ತೆಗೆದಿದ್ದಾರೆ. ಅಂತೆಯೇ ಅವರ ಬದುಕಿನ ಪ್ರತಿಯೊಂದು ಕ್ರಿಯೆಯೂ ಕಾಯಕ ಎನಿಸಿತು. ಅದು ಆತ್ಮೋದಾರದ ಸಾಧನೆಯಾದಂತೆ ಜೀವನ ನಿರ್ವಹಣೆಯ ಮಾರ್ಗವೂ ಆಯಿತು. ಅದರಿಂದ ಆರ್ಥಿಕ ಭದ್ರತೆಯಾಯಿತು. ಸಾಮಾಜಿಕ ಬೆಳವಣಿಗೆಯಾಯಿತು. ಸತ್ಯ ಶುದ ಪ್ರಾಮಾಣಿಕ ಕಾಯಕದಿಂದ ಅವರ ಈ ಕಾಯಕವೇ ಅವರಿಗೆ ಕೈಲಾಸವೆನಿಸಿತು. ಹೀಗೆ ಪ್ರಪಂಚದಲ್ಲಿದ್ದು ಪಾರಮಾರ್ಥ ಸಾಧಿಸುವುದರಿಂದಾಗಿ ಆ ಕಾಯಕವು ಆದರ್ಶವೂ

* ಜಾನಪದ ವಿದ್ವಾಂಸರು, ಗುಲ್ಬರ್ಗಾ

ಮತ್ತೊಬ್ಬರ ಕೈಯಲ್ಲಿ ಮಾಡಿಸದೆ ತಾನೇ ಮಾಡಬೇಕೆಂಬುದನ್ನು ಬಸವಣ್ಣನವರು ಪರಿಣಾಮಕಾರಿಯಾಗಿ ತಮ್ಮ ವಚನದಲ್ಲಿ ವಿಶ್ಲೇಷಿಸಿರುವು ದನ್ನು ಕಾಣಬಹುದಾಗಿದೆ.

*ತನ್ನಾಶ್ರಯದ ರತಿಸುಖವನು, ತಾನುಂಬ ಊಟವನು*
*ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ ?*
*ತನ್ನ ಲಿಂಗಕ್ಕೆ ಮಾಡುವ ನಿತ್ಯ ನೇಮವ ತಾ ಮಾಡಬೇಕಲ್ಲದೆ*
*ಬೇರೆ ಮತ್ತೊಬ್ಬರ ಕೈಯಲ್ಲಿ ಮಾಡಿಸಬಹುದೇ ?*
*ಕೆಮ್ಮನೆ ಉಪಚಾರಕ್ಕೆ ಮಾಡುವರಲ್ಲದೆ*
*ನಿಮ್ಮನೆತ್ತ ಬಲ್ಲರು ಕೂಡಲಸಂಗಮದೇವಾ.*

ಈ ವಚನದಲ್ಲಿ ಬಸವಣ್ಣನವರು ತನ್ನಾಶ್ರಮದ ರತಿಸುಖವನು, ತಾನುಂಬ ಊಟವನು ಮತ್ತೊಬ್ಬರ ಕೈಯಲ್ಲಿ ಮಾಡಿಸಬಾರದು ಎಂದ ಹಾಗೆ ತನ್ನ ಉದರಪೋಷಣೆಗೆ, ತನ್ನ ಆತ್ಮೋದ್ಧಾರಕ್ಕೆ ಕಾರಣೀಭೂತವಾಗಿರುವ ತಾನು ಮಾಡಬೇಕಾದ ಕಾಯಕವನ್ನು ಬೇರೊಬ್ಬರಿಂದ ಮಾಡಿಸಿ ಅವರು ಗಳಿಸಿದ ಹಣದಲ್ಲಿ ತನ್ನ ಉದರ ನಿರ್ವಹಣೆ ಮಾಡಿಕೊಳ್ಳುವುದು ಅದು ಹೇಡಿತನದ, ಹೇಸಿ ಗುಣದವರ ಕೆಲಸ ಎಂದು ಸಾರಿರುವುದನ್ನೂ ತಿಳಿಯ ಬಹುದಾಗಿದೆ.

ಶರಣರು ಕಾಯಕಧೀರರಾಗುವುದರ ಜೊತೆಗೆ ದಾಸೋಹ ಪ್ರಿಯರೂ ಆಗಿದ್ದರು ಎಂಬುದನ್ನು ಅವರ ಚರಿತ್ರೆಯಿಂದ ಅರಿತು ಕೊಳ್ಳಬಹುದಾಗಿದೆ. ಗಳಿಕೆ, ಬಳಕೆಗಳೆರಡರ ಪಾವಿತ್ರ್ಯವನ್ನು ಶರಣರ ಈ ಕಾಯಕ-ದಾಸೋಹ ಸಿದಾಂತಗಳು ಲೋಕಕ್ಕೆ ತೋರಿಸಿಕೊಟ್ಟಿರುತ್ತವೆ. ಕಾಯಕ ಮತ್ತು ದಾಸೋಹ ಇವೆರಡೂ ತತ್ವಗಳು ಒಂದೇ ನಾಣ್ಯದ ಎರಡು ಮುಖಗಳಿದ್ದಂತೆ. ಕಾಯಕದ ಪರಿಶ್ರಮದಿಂದ ಬಂದ ಅಂದಂದಿನ ದ್ರವ್ಯ ಅದು ದಾಸೋಹದ ಮೂಲಕ ಅಂದಂದಿಗೇ ಸವೆಯುತ್ತಿರಬೇಕು ಎಂಬುದು ಕಾಯಕ ಸಿದಾಂತದ ಒಳಗುಟ್ಟಾಗಿರುವುದು. ಶರಣರದು ತಮ್ಮ ಒಡಲ ಅವಸರಕ್ಕೆ ಕುದಿವ ಕಾಯಕವಲ್ಲ, ಶಿವನ ಶಿವಶರಣರ ನಿಲುವಿಗೆ ತಕ್ಕಂತೆ ನಡೆಯುವ ಕಾಯಕವದು. ಅಂತೆಯೇ ಬಸವಣ್ಣನವರು ಒಕ್ಕಲುತನ, ವ್ಯಾಪಾರ, ಜನಸೇವೆ - ಹೀಗೆ ಮಾಡುವ ಕಾಯಕದಿಂದ ಬರುವ ದ್ರವ್ಯ ದಾಸೋಹಕ್ಕೆ ಮಿಸಲು ಎಂದೂ 'ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದ ಕ್ರೀಯ ಮಾಡೆನು. ನಿಮ್ಮ ಸೊಮ್ಮ ನಿಮಗೆ ಸಲ್ಲಿಸುವೆನೆಂದರಿದು ಕೂಡಲ ಸಂಗಮನ ಆಣೆಯಿಟ್ಟು ಹೇಳಿರುವುದನ್ನೂ ಅವರ ವಚನದಲ್ಲಿ ಗುರುತಿಸ ಬಹುದಾಗಿದೆ.

*ನಾನು ಆರಂಭವ ಮಾಡುವೆನಯ್ಯ - ಗುರುಪೂಜೆಗೆಂದು*
*ನಾನು ಬೆವಹಾರವ ಮಾಡುವೆನಯ್ಯ - ಲಿಂಗಾರ್ಚನೆಗೆಂದು*
*ನಾನು ಪರಸೇವೆಯ ಮಾಡುವೆನಯ್ಯ -*
*ಜಂಗಮದಾಸೋಹಕ್ಕೆಂದು*
*ನಾನಾವ ಕರ್ಮಗಳ ಮಾಡಿದಡೆಯೂ ಆ ಕರ್ಮಫಲ ಭೋಗವನೀ ಕೊಡುವೆ ಎಂಬುದ ನಾನು ಬಲ್ಲೆನು. ನೀ ಕೊಟ್ಟ ದ್ರವ್ಯವ ನಿಮಗಲ್ಲದೆ ಮತ್ತೊಂದಕ್ಕೆ (ವ್ಯಯ) ಮಾಡೆನು, ನಿಮ್ಮ ಸೊಮ್ಮ ನಿಮಗೆ ಸಲ್ಲಿಸುವೆ ನಿಮ್ಮಾಣೆ ಕೂಡಲ ಸಂಗಮದೇವಾ*

ಕಾಯಕದಿಂದ ಬಂದ ಸಂಪತ್ತಿನ ಸಮಾನ ಹಂಚಿಕೆಯೂ ಇದಾಗಿರುವುದು.

ಶರಣರು ಕಾಯಕದಿಂದ ಬಂದ ಗಳಿಕೆಯನ್ನು ಶಿವಸ್ವರೂಪಿಗಳಾದ ಗುರು-ಲಿಂಗ-ಜಂಗಮರಿಗೆ, ಸಮಾಜಕ್ಕೆ ವ್ಯಯ ಮಾಡುತ್ತಲಿದ್ದರು. ವ್ಯಷ್ಟಿಯಿಂದ ಕೂಡಿದ ಸಂಪತ್ತನ್ನೂ, ಸಮಷ್ಟಿ ಸಂಪತ್ತನ್ನಾಗಿ ಮಾರ್ಪಡಿಸುವ ಕ್ರಿಯೆ - ಈ ದಾಸೋಹ ತತ್ವದಲ್ಲಿದೆ. ಉಪಾಸ್ಯ ಮೂರ್ತಿ ಗಳಾಗಿರುವ ಗುರು-ಲಿಂಗ- ಜಂಗಮರಿಗೆ ಸಮರ್ಪಿಸಿ, ಜಂಗಮ ಸೇವೆ, ಸಮಾಜ ಸೇವೆಯನ್ನು ಶರಣರು ಮಾಡುತ್ತಲಿದ್ದರು. ಇದರಿಂದ ಬಡವ ಶ್ರೀಮಂತರೆಂಬ ಭೇದ-ಭಾವ ಇಲ್ಲದಂತಾಗಿ ಸಂಪತ್ತಿನ ಸಮವಿನಿಯೋಗವಾಗುತ್ತಿತ್ತು. ಇದು ಪುರೋಹಿತ ಶಾಹಿಯನ್ನು ಧಿಃಕರಿಸಿತು. ರಾಜಶಾಹಿಯನ್ನು ಪ್ರತಿಭಟಿಸಿತು.

ಶರಣರು 'ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ' ಎಂದು ಪ್ರಾರ್ಥಿಸಿಕೊಂಡಿರುವರು.

*'ಸೋಹಂ ಎಂಬುದದು ಅಂತರಂಗದ ಮದ ನೋಡಯ್ಯ,*
*ಶಿವೋಹಂ ಎಂಬುದದು ಬಹಿರಂಗದ ಮದ ನೋಡಯ್ಯ*
*ಈದ್ವಂದ್ವವನಳಿದು ದಾಸೋಹಂ ಎಂದೆನಿಸಯ್ಯ*
*ಕಪಿಲಸಿದ ಮಲ್ಲಿಕಾರ್ಜುನಾ'*

ಎಂದು ಶಿವಯೋಗಿ ಸಿದರಾಮರು ಹಾಡಿರುವುದನ್ನು ಕಾಣಬಹುದಾಗಿದೆ. ಅದೇ ರೀತಿ :

*'ಜನ್ಮಜನ್ಮಕ್ಕೂ ಹೋಗಲೀಯದೆ ಸೋಹಂ ಎಂದೆನಿಸದೆ ದಾಸೋಹಂ ಎಂದೆನಿಸಯ್ಯ ಲಿಂಗ ಜಂಗಮ ಪ್ರಸಾದದ ನಿಲವತೋರಿ ಬದುಕಿಸಯ್ಯ ಕೂಡಲ ಸಂಗಮದೇವಾ ನಿನ್ನ ಧರ್ಮ'*

ಎಂದು ಬಸವಣ್ಣನವರೂ 'ದಾಸೋಹಂ ಎಂದೆನಿಸಯ್ಯ' ಎಂದೂ ಹಾಡಿರುವರು.

ಮನುಷ್ಯನು ಸಹಸಾ ಸ್ವಾರ್ಥಿ. ಹಾಗಾಗದಂತೆ ಸಮಾಜದ ಎಲ್ಲರೊಂದಿಗೂ ಕೂಡಿ ಒಂದಾಗಿ ಬದುಕುವ, ತಿನ್ನುವ, ಸದಾಚಾರಿಯಾಗಿ, ಮಹಾದಾಸೋಹಿಯಾಗಿ ಬದುಕುವುದೇ ಭಕ್ತಿ ಪಕ್ಷವಾಗಿರುವುದು. ಅಂತಿಲ್ಲದವನ ಬಾಳು ಅದು ಕಾಗೆ-ಕೋಳಿ ಗಳಿಗಿಂತಲೂ ಕೀಳು ಎಂದು ಕರೆದಿರುವುದನ್ನು ಬಸವಣ್ಣನವರೇ ತಮ್ಮ ವಚನವೊಂದರಲ್ಲಿ ಸಾರಿರುವುದನ್ನು ಕಾಣಬಹುದಾಗಿದೆ.

*'ಕಾಗೆ ಒಂದಗುಳ ಕಂಡಡೆ ಕರೆಯದೆ ತನ್ನ ಬಳಗವನು ?*
*ಕೋಳಿ ಒಂದು ಗುಟುಕ ಕಂಡಡೆ ಕೂಗಿ ಕರೆಯದೆ*
*ತನ್ನ ಕುಲವನೆಲ್ಲವನು ? ಶಿವಭಕ್ತನಾಗಿ ಭಕ್ತಿಪಕ್ಷವಿಲ್ಲದಿದ್ದಡೆ*
*ಆ ಕಾಗೆ ಕೋಳಿಯಿಂದ ಕರಕಷ್ಟ ಕಾಣಾ ಕೂಡಲ ಸಂಗಮದೇವಾ'*

ಬಸವಣ್ಣನವರು ನುಡಿ-ನಡೆಗಳನ್ನು ಒಂದಾಗಿಸಿಕೊಂಡು ಬಾಳಿದವರು. ಇತರರನ್ನು ಹಾಗೆ ಬಾಳಲೂ ಹಚ್ಚಿದವರು. ಅವರದು ಭಕ್ತಿ ಸುಭಾಷೆಯ ನುಡಿ. ನುಡಿದಂತೆ ನಡೆಯುವ ನಡೆಯೊಳಗೆ ನುಡಿಯ ಪೂರೈಸುವಲ್ಲಿ ಒಂದು ಜವೆ ಕೊರತೆ ಯಾದಡೆ ಎನ್ನನದ್ದಿ ನೀನೆದ್ದು ಹೋಗು ಎಂದು ಬಸವಣ್ಣನವರು ಭಾಷೆ ಕೊಟ್ಟಿರುವುದನ್ನು ಅವರ ವಚನದಲ್ಲಿ ಗುರುತಿಸ ಬಹುದಾಗಿದೆ.

*'ಭಕ್ತಿ ಸುಭಾಷೆಯ ನುಡಿಯ ನುಡಿವೆ,*
*ನುಡಿದಂತೆ ನಡೆವೆ, ನಡೆಯೊಳಗೆ*
*ನುಡಿಯ ಪೂರೈಸುವೆ, ಮೇಗೆ ತೂಗುವ*
*ತ್ರಾಸು ಕಟ್ಟಳೆ ನಿಮ್ಮ ಕೈಯಲ್ಲಿ ಒಂದು ಜವೆ*
*ಕೊರತೆಯಾದಡೆ ಎನ್ನನದ್ದಿ ನೀನೆದ್ದು ಹೋಗು*
*ಕೂಡಲ ಸಂಗಮದೇವಾ'.*

ಎಂಬ ತಮ್ಮ ವಚನದಲ್ಲಿ ಬಸವಣ್ಣನವರ ಭಕ್ತಿ ಸುಭಾಷೆಯ ನುಡಿಯ ಕೆಚ್ಚನ್ನು ಮನಂಬುಗುವಂತೆ ಚಿತ್ರಿಸಿರುವರು.

ಬಸವಾದಿ ಶರಣರ ಕಾಯಕ ದಾಸೋಹ ಸಿದಾಂತಗಳು ಇಂದು ಮನುಕುಲಕ್ಕೆ ಬೇಕಾಗಿರುವ ಅತ್ಯವಶ್ಯಕ ತತ್ವಗಳಾಗಿವೆ. ಪ್ರತಿಯೊಬ್ಬರೂ ಕಾಯಕ ತತ್ವದಂತೆ ಪ್ರಾಮಾಣಿಕರಾಗಿ ದುಡಿದರೆ ಭ್ರಷ್ಟಾಚಾರವಿರುವುದಿಲ್ಲ, ನಿರುದ್ಯೋಗ ಸಮಸ್ಯೆ ಉದ್ಭವಿಸು ವುದಿಲ್ಲ, ಬಡತನ ದೂರಾಗುವುದು. ಜೊತೆ ಜೊತೆಗೆ ಬರುವ ದಾಸೋಹ ಸಿದಾಂತದ ಅನುಷ್ಠಾನದಿಂದ ಜಾತ್ಯತೀತ ಮನೋಭಾವ ಬೆಳೆದು ಸಮತೆಯನ್ನು ಆಳವಡಿಸಿಕೊಂಡು ಗಳಿಸಿದ ಸಂಪತ್ತಿನ ಸಮಹಂಚಿಕೆಯಾಗಿ ಬಡವ- ಶ್ರೀಮಂತರೆಂಬ ಅಸಮಾನತೆ ದೂರಾಗುವುದು. ಇದನ್ನು ಬರಿಯ ಹೇಳಿಕೆಗಾಗಿ ಬಸವಾದಿ ಶರಣರು ಸಾರಿರುವುದಿಲ್ಲ, ನಿತ್ಯ ಜೀವನದಲ್ಲಿ ಅಳವಡಿಸಿಕೊಂಡು ಬಂದವರು. ❑

## ಸಿದ್ಧಗಂಗೆಯ ಅನಂತಚೇತನ

ಓ ಅನಂತ ಚೇತನ,
ಬೆಳಗುತಿಹೆ ಚಿರಂತನ
ಕಾವಿ ವಸ್ತ್ರವನ್ನು ಧರಿಸಿ
ಶಿವನ-ಕುವರ ಹೆಸರನಿರಿಸಿ
ಭಕ್ತಿ-ಹೃದಯ ಭಾವ ಬೆರಗಿ
ಓ ಅನಂತ ಚೇತನ
ಬೆಳಗುತಿಹೆ ಚಿರಂತನ !

ಉದ್ದಾನರ ಸಿದ್ಧಮೂರ್ತಿ
ಅಟವೀಶರ ಕರುಣಾಮೂರ್ತಿ
ಸಿದ್ಧಯತಿಯ ವೃದ್ಧಿಮೂರ್ತಿ
ಲೋಕ ಲೋಕದಲ್ಲಿ ಕೀರ್ತಿ
ಓ ಅನಂತ ಚೇತನ
ಬೆಳಗುತಿಹೆ ಚಿರಂತನ !

ಕೋಟಿ ಶಿಷ್ಯರಿಗೆ – ಅಶನ ವಸತಿ,
ದುಡಿದು ಪಡೆದು ಕೊಟ್ಟಿರಿ ನೀವು;
ಜ್ಞಾನ ನಿಧಿಯೇ ಆದಿರಿ ನೀವು,
ಪಿತುರ್ಮಾತನಾದೆ ನೀವು;
ಓ ಅನಂತ ಚೇತನ
ಬೆಳಗುತಿಹೆ ಚಿರಂತನ !

ಕಾಯಕ-ದಾಸೋಹ ತತ್ವದ ರೂವಾರಿಗಳು,
ಮಾನವಕುಲದ ಉದ್ಧಾರಕರು;
ವಸುದೈವ ಭಂಡಾರಿಗಳು,
ಹರಿಸುತಿಹಿರಿ ಶಿವಲಹರಿ;
ಓ ಅನಂತ ಚೇತನ
ಬೆಳಗುತಿಹೆ ಚಿರಂತನ !

'ಭಕ್ತಿಯ' ಭಂಡಾರಿಯಾಗಿ,
'ಜ್ಞಾನದ' ದಾಸೋಹಿಯಾಗಿ;
'ಅನ್ನೇತಿಬ್ರಹ್ಮ' ತಾವೇ ಆಗಿ,
ತ್ರಿವಿಧ-ದಾಸೋಹಿ ಎಂದು;
ಸಾಗು, ಸಾಗು, ಸಾಗುತಿರುವ,
ಓ ಅನಂತ ಚೇತನ
ಬೆಳಗುತಿಹೆ ಚಿರಂತನ !

– ವಿದ್ವಾನ್ ಎಸ್. ಷಡಕ್ಷರಯ್ಯ

# ಸೇವಾಚೇತನ ಶ್ರೀ ಟಿ.ಬಿ. ಶೇಖರ್

– ಜಿ.ಎಸ್. ಸೋಮಶೇಖರ್ (ಸೋಮಣ್ಣ) *

ತುಮಕೂರು ನಗರದಲ್ಲಿ ಅನೇಕ ವಾಣಿಜ್ಯೋದ್ಯಮಿ ಕುಟುಂಬಗಳು ಸಮಾಜ ಸೇವೆಯ ಮೂಲಕ ನಗರದ ಪ್ರಗತಿಗೆ ಪೂರಕವಾಗಿವೆ. ಅವುಗಳಲ್ಲಿ 'ಜೈ ಭಾರತ್' ಮನೆತನವೂ ಒಂದು. ನಗರದ ಸುಪ್ರಸಿದ್ಧ ವಾಣಿಜ್ಯೋದ್ಯಮಿ ಶ್ರೀ ಬಸವರಾಜು, ಶ್ರೀಮತಿ ಶಾರದಮ್ಮ ಅವರ ಜ್ಯೇಷ್ಠ ಹಾಗೂ ಶ್ರೇಷ್ಠ ಪುತ್ರರಾದ ಶ್ರೀ ಟಿ.ಬಿ. ಶೇಖರ್‌ರವರು ನಗರದ ನಾಗರಿಕರಿಗೆ ತುಂಬಾ ಪ್ರಿಯರಾದವರು.

ಸಾಧಾರಣವಾದ ನಿಲುವು, ಕೆಂಪು ಬಣ್ಣ, ಮಟ್ಟಸವಾದ ದೇಹ ಹಾಗೂ ನೋಡಿದರೆ ಸಂತನಂತೆ ಕಾಣುವ ವ್ಯಕ್ತಿತ್ವ. ಇವರ ಕಣ್ಣುಗಳಲ್ಲಿ ಒಂದು ರೀತಿಯ ಸೆಳೆತ ಮತ್ತು ವಾತ್ಸಲ್ಯ ಎದ್ದು ಕಾಣುತ್ತವೆ.

ಮಾತು ಬಹಳ ಮಿತ, ತೂಗಿ ಆಡುವ ಮಾತಿನ ವೈಖರಿ ಮನಮುಟ್ಟುವಂತಹದು. ಆಡುವ ಮಾತಿನಲ್ಲಿ ಬಿರುಸಿಲ್ಲ, ಕೊಂಕಿಲ್ಲ. ತಾಳ್ಮೆಯಿಂದ ಬೇರೆಯವರ ಮಾತನ್ನು ಕೇಳುತ್ತಾ ಆಡುವ ಮಾತು ಬೇರೆಯವರಿಗೆ ತುಂಬಾ ಪ್ರಿಯವಾಗಿರುತ್ತದೆ.

ತಂದೆ ಶ್ರೀ ಬಸವರಾಜು ಅವರಿಗೆ ತುಂಬಾ ಗೌರವವನ್ನು ಕೊಡುವುದರ ಮೂಲಕ ತಂದೆಯಿಂದಲೇ ಬಹಳ ಗೌರವಕ್ಕೆ ಪಾತ್ರರಾಗಿದ್ದ ಶ್ರೀ ಟಿ.ಬಿ. ಶೇಖರ್ ನಡೆಯಲ್ಲಿ, ನುಡಿಯಲ್ಲಿ ಶ್ರೇಷ್ಠರೆನಿಸಿಕೊಂಡವರು.

ತಾಯಿ ಶ್ರೀಮತಿ ಶಾರದಮ್ಮ ತಾಳ್ಮೆಯ ಮೂರ್ತಿ. ಶ್ರೀ ಟಿ.ಬಿ.ಶೇಖರ್‌ರವರನ್ನು ಕಂಡರೆ ಅತಿಯಾದ ಮಮತೆ. ತಾಯಿ ಮತ್ತು ಶ್ರೀ ಟಿ.ಬಿ.ಶೇಖರ ಇಬ್ಬರೂ ಮಾತನಾಡುವುದನ್ನೂ ನಾನು ಗಮನಿಸಿದ್ದೇನೆ. ಎಂತಹ ಸಮಸ್ಯೆ ಇದ್ದರೂ ಚರ್ಚೆಯ ಮೂಲಕ ಇಬ್ಬರೂ ಪರಿಹರಿಸಿಕೊಳ್ಳುವ ರೀತಿ ಅಪೂರ್ವ ವಾದುದು.

ಶ್ರೀಮತಿ ಆಶಾಶೇಖರ್ ಪತಿಗೆ ತಕ್ಕ ಮನಮೆಚ್ಚಿದ ಮಡದಿ. ನಗುವಿನಲ್ಲಿ ವಾತ್ಸಲ್ಯ, ಕೆಲಸದಲ್ಲಿ ಜಾಣತನ, ಸಂಸಾರದಲ್ಲಿ ಟಿ.ಬಿ.ಶೇಖರವರಿಗೆ ಚತುರ್ಭುಜರಾಗಿರುವುದು ಹೆಮ್ಮೆಯ ವಿಚಾರ. ಮಮತೆಯ ಇಬ್ಬರು ಹೆಣ್ಣು ಮಕ್ಕಳಾದ ಶ್ರೀಮತಿ ಟಿ.ಎಸ್.ಕಾವ್ಯ ಹೇಮಂತ್ ಮತ್ತು ಟಿ.ಎಸ್.ನವ್ಯ ನನಗೆ ಯಾವುದೋ ಪೂರ್ವ ಜನ್ಮದ ಸುಕೃತದಿಂದ ಲಭಿಸಿದ್ದಾರೆ ಎಂದು ಹೇಳುವ ಶ್ರೀ ಟಿ.ಬಿ.ಶೇಖರ್ ಸಂಸಾರಕ್ಕೆ ಅದೆಷ್ಟು ಮಾನ್ಯತೆ ಕೊಡುತ್ತಾರೆನ್ನುವುದು ತಿಳಿಯುತ್ತದೆ. ಶ್ರೀ.ಟಿ.ಬಿ.ಶೇಖರ್‌ರವರು ವ್ಯವಹಾರದಲ್ಲಿ ಕುಶಲತೆ ಪಡೆದವರು, ಸಂಸಾರದಲ್ಲಿ ವಾತ್ಸಲ್ಯ ತೋರಿದವರು. ಆರ್ಥಿಕವಾಗಿ ಎಲ್ಲಾ ಜವಾಬ್ದಾರಿಯನ್ನು ಹೆಗಲ ಮೇಲೆ ಹೊತ್ತು ಸಮಾಜಕ್ಕೆ ಮಾದರಿಯಾದವರು. ಇನ್ನು ಧಾರ್ಮಿಕ ಕಾರ್ಯಕ್ಷೇತ್ರಕ್ಕೆ ಬಂದರೆ ಅವರ ಚಿಂತನೆ, ಕೆಲಸ ಮಾಡುವ ರೀತಿ ಬೇರೆಯುವರನ್ನು ತನ್ನ ಕೆಲಸದ ಮೂಲಕ ಸೆಳೆದುಕೊಳ್ಳುವ ರೀತಿ ಶ್ಲಾಘನೀಯ.

ಚಿಕ್ಕತೊಟ್ಟಿಲಕೆರೆಯಲ್ಲಿ ೨೦೦೦ ನೇ ಇಸವಿಯಲ್ಲಿ ಅಟವೀ ಶಿವಲಿಂಗ ಸ್ವಾಮಿಗಳು ಒಂದು ಸಭೆ ಕರೆದು, ಶ್ರೀ ಅಟವೀ ಸ್ವಾಮಿಗಳ ೧೦೦ ವರ್ಷಗಳ ಪುಣ್ಯಾರಾಧನೆ ಮಾಡಬೇಕೆಂದಾಗ, ನಾನು ಸಭೆಯಲ್ಲಿ ಮಾತನಾಡುತ್ತಾ, ತಾವು ಮಾಡುವ ಕೆಲಸ ಬಹಳ ಉತ್ತಮವಾದುದ್ದು, ಅತ್ಯಂತ ಜವಾಬ್ದಾರಿಯುತವಾದುದ್ದೆಂದು ಭಾವಿಸಿ ಶ್ರೀ ಟಿ.ಬಿ.ಶೇಖರ್‌ರವರನ್ನು ಕಾರ್ಯದರ್ಶಿಯಾಗಿ ಮಾಡಬೇಕೆಂದು ಸಭಿಕರಲ್ಲಿ ವಿನಂತಿಸಿದೆ. ನನ್ನ ಮಾತಿಗೆ ಎಲೆಕ್ಟ್ರಿಕ್ ಕಂಟ್ರಾಕ್ಟರ್ ಟಿ.ಸಿ.ಚಂದ್ರಶೇಖರ್ ದನಿಗೂಡಿಸಿದರು.

ಸಭೆಯಲ್ಲಿ ನೆರೆದವರೆಲ್ಲಾ ಶ್ರೀ ಟಿ.ಬಿ. ಶೇಖರ್‌ರವರ ಬಗ್ಗೆ ಮೆಚ್ಚುಗೆಯ ಮಾತನಾಡಿ, ಕಾರ್ಯದರ್ಶಿಯಾಗಿ ಶ್ರೀ ಟಿ.ಬಿ.ಶೇಖರ್‌ರವರನ್ನು ಒಪ್ಪಿಸಲು ನನಗೆ ಜವಾಬ್ದಾರಿ ವಹಿಸಿದರು.

ಶ್ರೀ ಟಿ.ಬಿ.ಶೇಖರ್ ಚಿಕ್ಕತೊಟ್ಟಿಲಕೆರೆಯಲ್ಲಿ ಕಾರ್ಯದರ್ಶಿಯಾದ ನಂತರ ಅವರು ತೆಗೆದುಕೊಳ್ಳುವ

* ಅಧ್ಯಕ್ಷರು, ಭೂಮಿ ಬಳಗ, ತುಮಕೂರು





ತೀರ್ಮಾನಗಳನ್ನು ಇದುವರೆಗೂ ಯಾರೂ ಎಂದೂ ಪ್ರಶ್ನಿಸಿಲ್ಲ.

ನೋಡು ನೋಡುತ್ತಲೇ ಹಲವಾರು ಕೋಟಿ ರೂ.ಗಳ ಕೆಲಸ ಮಾಡಿರುವುದು ಶ್ರೀ ಟಿ.ಬಿ.ಶೇಖರ್ ಮಠಕ್ಕೆ ನೀಡಿದ ಕೊಡುಗೆ ಹಾಗೂ ಸಮಾಜಕ್ಕೆ ಆಸ್ತಿಯಾಗಿದೆ.

ಶ್ರೀ ಟಿ.ಬಿ.ಶೇಖರ್ ಜೊತೆಯಲ್ಲಿ ಧಾರ್ಮಿಕ ಕ್ಷೇತ್ರಗಳಿಗೆ ಪ್ರವಾಸ ಹೋಗುವುದು ಒಂದು ವಿಶಿಷ್ಟವಾದ ಅನುಭವ.

ಒಮ್ಮೆ ನಾನು, ಶ್ರೀ ಟಿ.ಬಿ.ಶೇಖರ್, ಶಿವರುದ್ರಪ್ಪ- ಮೂರೂ ಜನ ತಮಿಳುನಾಡಿಗೆ ಧಾರ್ಮಿಕ ಪ್ರವಾಸ ಮಾಡಿದ್ದೆವು. ಆ ಸಂದರ್ಭದಲ್ಲಿ ಅವರು ತಮ್ಮ ವಾಹನವನ್ನು ಕಡಿಮೆ ಎಂದರೆ ೭-೮ ಗಂಟೆ ಒಂದೇ ಸಮನೆ ಚಾಲನೆ ಮಾಡುತ್ತಿದ್ದರೂ, ಯಾವ ಬೇಸರವನ್ನೂ ಮುಖದಲ್ಲಿ ತೋರಿಸುತ್ತಿರಲಿಲ್ಲ. ಧಾರ್ಮಿಕವಾಗಿ, ಸಾಮಾಜಿಕವಾಗಿ ಮಾರ್ಗದರ್ಶನ ನೀಡುವ ಒಬ್ಬ ಉತ್ತಮ ಚಾಲಕ ಹೇಗಿರಬೇಕೆಂಬುದನ್ನು ತೋರಿಸಿಕೊಟ್ಟರು.

ಶ್ರೀ ಟಿ.ಬಿ.ಶೇಖರ್ ಎಂದರೆ ಸ್ನೇಹಕ್ಕೆ, ನೋವಿನಲ್ಲಿ ನೆರವಿಗಾಗಿ, ಸಂಕಟ ಬಂದಾಗ ಸಾಂತ್ವನ ಹೇಳುವುದಕ್ಕೆ, ಆರ್ಥಿಕ ಮುಗ್ಗಟ್ಟಿನ ನಿವಾರಣೆಗಾಗಿ, ಶೇಖರ್ ಸಹಾಯ ಹಸ್ತ ಯಾವಾಗಲೂ ಸ್ನೇಹಿತರಿಗಾಗಿ ಚಾಚಿರುತ್ತದೆ.

ಕೆಲವು ಸಂದರ್ಭದಲ್ಲಿ ಯಾರಾದರೂ ದುಡುಕಿ ಮಾತನಾಡಿದರೆ, ಶ್ರೀ ಟಿ.ಬಿ.ಶೇಖರ್ ಆ ಸಂದರ್ಭವನ್ನು ಹೊರತುಪಡಿಸಿ ಮತ್ತೊಂದು ಸಂದರ್ಭದಲ್ಲಿ ತಿಳಿಹೇಳುವುದು ಒಬ್ಬ ಹಿತೈಷಿಗಳಲ್ಲದೇ ಬೇರೆಯವರಿಗೆ ಸಾಧ್ಯವಿಲ್ಲ.

ಈ ಎಲ್ಲಾ ಮಾನವೀಯ ಮೌಲ್ಯಗಳನ್ನು ಸಂಸಾರಕ್ಕೆ, ಸಮಾಜಕ್ಕೆ ಪೂರಕವಾಗಿ ವಿನಿಯೋಗಿಸುವ ಸಹಜ ಗುಣ ಶ್ರೀ ಟಿ.ಬಿ. ಶೇಖರ್‌ರವರಲ್ಲಿ ಮನೆ ಮಾಡಿದೆ. ಒಡಲಿಗೆ ಎಷ್ಟು ಕಷ್ಟವಾದರೂ, ದಣಿವಾದರೂ ಒಪ್ಪಿಕೊಂಡ ಕೆಲಸ ಅಚ್ಚುಕಟ್ಟಾಗಿ ಮುಗಿಸುವುದು ಒಂದು ರೀತಿಯ ಸದಾಚಾರವೆಂದು ತಿಳಿದು ಟಿ.ಬಿ.ಶೇಖರ್ ನಮಗೆಲ್ಲರಿಗೂ ಮಾದರಿ.

ಶ್ರೀ ಟಿ.ಬಿ.ಶೇಖರ್‌ರವರು ೬೦ ಸಂವತ್ಸರಗಳನ್ನು ಪೂರೈಸುತ್ತಿರುವ ಈ ಸಮಯದಲ್ಲಿ ಅವರಿಗೆ, ಅವರ ಕುಟುಂಬಕ್ಕೆ ಶ್ರೀಗುಬ್ಬಿ ಚನ್ನಬಸವೇಶ್ವರ ಸ್ವಾಮಿಯವರು ಸಂಪೂರ್ಣ ಆಶೀರ್ವದಿಸಲೆಂದು ಪ್ರಾರ್ಥಿಸೋಣ.

## ಬಸವನ ನೆನೆಯಣ್ಣ



ಶ್ರೀ ಗುರುದೇವ ಬಸವಣ್ಣ
ಈ ನುಡಿ ಮಂತ್ರವೆ ಬಲುಚೆನ್ನ
ಚಿಂತೆಯು ಏತಕೆ ನಿನಗಣ್ಣ
ಮನದಿ ಬಸವನ ನೆನೆಯಣ್ಣ

ಭಾಗ್ಯವಾಡಿಯಲಿ ಜನಿಸಿದನಣ್ಣ
ಲೋಕಕೆ ಬೆಳಕಾಗಿ ಬಂದಿಹನಣ್ಣ
ಕರ್ಮಬಂಧನ ಕಳಚಿದನಣ್ಣ
ಸಂಗಮ ಕ್ಷೇತ್ರಕ್ಕೆ ತೆರಳಿದನಣ್ಣ

ಕಲ್ಯಾಣಪುರದಲಿ ನೆಲೆಸಿದನಣ್ಣ
ಅನುಭವ ಮಂಟಪ ಕಟ್ಟಿದನಣ್ಣ
ಮಂತ್ರಿಯಾಗಿ ತಾ ಶೋಭಿತನಣ್ಣ
ಕ್ರಾಂತಿ ಪುರುಷನವ ಬಸವಣ್ಣ

ಡಂಭಾಚಾರವ ತೊಡೆದಿಹನಣ್ಣ
ಸಪ್ತ ಸೂತ್ರವ ನೀಡಿದನಣ್ಣ
ನೂರೆಂಟು ದೇವರ ಬಿಟ್ಟಿಹನಣ್ಣ
ಇಷ್ಟಲಿಂಗವ ಕೊಟ್ಟಿಹನಣ್ಣ

ಜಾತಿ-ಭೇದವ ಅಳಿಸಿದನಣ್ಣ
ಶರಣ ಸಮಾಜ ಕಟ್ಟಿದನಣ್ಣ
ನೀತಿಯ ವಚನ ರಚಿಸಿದನಣ್ಣ
ಬದುಕಿನ ಮಾರ್ಗವ ತೋರಿದನಣ್ಣ

– ಆರ್.ಎಸ್. ಚಾಪಗಾವಿ
೬೪೪, ಬಸವ ಚೇತನ,
ರಾಮತೀರ್ಥನಗರ, ಬೆಳಗಾವಿ-೧೫

# ಸತ್ಯದ ಅವಜ್ಞೆ

– ಶ್ರೀ ಮ.ನಿ.ಪ್ರಸ್ವ. ಶಾಂತಮಲ್ಲಿಕಾರ್ಜುನ ಸ್ವಾಮಿಗಳು *

ಗೋವಿನ ಹಾಡು ಯಾರು ಕೇಳಿಲ್ಲ? ಕರ್ನಾಟಕದಲ್ಲಿ ಮನೆ ಮಾತಾಗಿರುವ ಹಾಡದು. ಎಷ್ಟು ಕೇಳಿದರೂ ಕೇಳಬೇಕೆನ್ನಿಸುವಂತಹುದು. ಸತ್ಯ ಅದೆಷ್ಟು ಬದುಕಿಗೆ ಸಮೀಪ, ಅಲ್ಲದೇ ಅದು ಅದೆಂತಹ ಕಠಿಣ ಹೃದಯವನ್ನು ಕರಗಿಸಬಲ್ಲಂತಹುದೆಂದು ನಮಗೆಲ್ಲ ತಿಳಿಸಿಕೊಟ್ಟಂತಹುದು. ವ್ಯಾಪ್ತಿನಂತಹುದೇ ಸತ್ಯವಾಕ್ಯವನ್ನು ಪಾಲಿಸಿದಂತಹ ಪುಣ್ಯಕೋಟಿಯ ಪ್ರಾಮಾಣಿಕತೆಯನ್ನು ಮೆಚ್ಚಿ ತನ್ನ ಬದುಕಿನಲ್ಲಿ ಇದನ್ನು ಅಳವಡಿಸಿಕೊಳ್ಳಲಾಗಲಿಲ್ಲವಲ್ಲಾ ಎಂದು ಹಾರಿ ನೆಗೆದು ಪ್ರಾಣಬಿಟ್ಟಂತಹ ವ್ಯಘ್ರ ಎಂತಹವರ ಕಣ್ಣಾಲಿಗಳಲ್ಲಿಯೂ ನೀರು ತರಿಸುವಂತಹುದು. ಇದನ್ನು ಏಕೆ ಉದಾಹರಿಸಬೇಕಾಯಿತು? ದಿನ ನಿತ್ಯದ ಬದುಕಿನಲ್ಲಿ ನಾವು ಸತ್ಯವನ್ನು ಅಳವಡಿಸಿಕೊಳ್ಳಲು ಒಂದಿಷ್ಟಾದರೂ ಚಿಂತಿಸಿದ್ದಿದೆಯೆ? ಎಲ್ಲಾ ಹಂತದಲ್ಲಿಯೂ ಒಬ್ಬ ಸಾಮಾನ್ಯ ಕಾರ್ಮಿಕನಿಂದ ಹಿಡಿದು ದೇಶದ ಅತ್ಯುನ್ನತ ಹುದ್ದೆಯನ್ನಲಂಕರಿಸಿದವರ ವರೆಗೆ ಇದನ್ನು ಮರೆಮಾಚುವ ಪ್ರಯತ್ನ ನಡೆದಿದೆಯಲ್ಲ, ಇದು ಸರ್ವಥಾ ಅಪರಾಧ. ನಮ್ಮನ್ನೇ ನಾವು ಶಿಕ್ಷಿಸಿಕೊಳ್ಳುತ್ತಿರುವ ರೀತಿ. ಬದುಕಿನಲ್ಲಿ ಒಂದಿಷ್ಟು ಎಡವಿದ್ದಕ್ಕೆ ಮಹಾತ್ಮಾ ಗಾಂಧೀಜಿಯವರು ತಮ್ಮ ತಂದೆಯ ಎದುರು ಹೋಗಿ ತಮ್ಮ ಅಪರಾಧಗಳನ್ನು, ಸುಳ್ಳು, ಜೂಜು, ಮದ್ಯಪಾನಗಳನ್ನು ಮಾಡಿರುವುದನ್ನು ಪ್ರಾಮಾಣಿಕವಾಗಿ ಒಪ್ಪಿಕೊಂಡು ಅದನ್ನು ಅಂದಿನಿಂದಲೇ ಬಿಟ್ಟರು. ತರುವಾಯ ಸತ್ಯವಾಕ್ಯವನ್ನು ಪಾಲಿಸಿದ ಅವರ ಜೀವನಾದರ್ಶ ಇಂದು ಜಗಜ್ಜಾಹೀರು. ಸತ್ಯವನ್ನು ಒಪ್ಪಿಕೊಂಡಾಗ ಅವರ ಮನಸ್ಸು ಅದೆಷ್ಟು ನಿರಾಳವಾಗಿರಬೇಡ? ಅದಕ್ಕೆ ಪ್ರಾಜ್ಞರು 'ಸತ್ಯಂ ವದ ಧರ್ಮಂ ಚರ' ಎಂದರು. ಸತ್ಯವು ನಿಷ್ಠುರವಾದದ್ದು. ಮಾನವನ ಮನ ನೊಂದೀತೆಂಬ ಭಾವನೆಯಿಂದ ಸತ್ಯಕ್ಕೆ ಅಪಚಾರ ಮಾಡಬಾರದೆಂಬುದು ಪ್ರಾಜ್ಞರ ಅಭಿಮತ. ದಿನನಿತ್ಯದ ಬದುಕು ಭ್ರಷ್ಟವಾಗುತ್ತಿದೆ. ಹಳ್ಳಿಗಳಲ್ಲಿ, ನಗರಗಳಲ್ಲಿ ಸಂಪತ್ತಿನ ವ್ಯಾಮೋಹ, ಕೀರ್ತಿಶನಿ ನಮ್ಮೆಲ್ಲರನ್ನೂ ಬಾಧಿಸುತ್ತಿದೆ. ಸತ್ಯವಾಕ್ಯ ಪರಿಪಾಲನೆ ಮಾಡಿದ 'ಹರಿಶ್ಚಂದ್ರ' ಇಂದು ಅಪಹಾಸ್ಯದ ವಸ್ತು. ಯಾರಾದರೂ ಜೀವನದಲ್ಲಿ ಒಂದಿಷ್ಟು ಸತ್ಯವನ್ನು ನುಡಿದರೆ ನೆರೆಕರೆಯವರು ಅವನೇನು ಸತ್ಯಹರಿಶ್ಚಂದ್ರನಾ? ಎಂದು ಮೂದಲಿಸುವುದುಂಟು. ಯಾರಾದರು ಮದ್ಯಪಾನ, ಬಿಡಿ ಸಿಗರೇಟು ಸೇದದಿದ್ದರೆ ನಮ್ಮ ಯುವ ಸಮೂಹಕ್ಕೆ, ಬಿಡಪ್ಪಾ ಅವನು 'ಗಾಂಧಿ' ಎಂದು ಹೇಳುವ ಪರಿಪಾಠವಿದೆ. ಇದೆಲ್ಲವೂ ನಮ್ಮನ್ನು ಯಾವ ದಿಕ್ಕಿನತ್ತ ಕೊಂಡೊಯ್ದಿದೆ? ಒಮ್ಮೆ ಒಂದು ಹಳ್ಳಿಯಲ್ಲಿ ಸತ್ಯಹರಿಶ್ಚಂದ್ರ ನಾಟಕ ನಡೆದಿತ್ತು. ನಾಟಕ ಮುಗಿದ ನಂತರ ಹಳ್ಳಿಯ ಜನರೆಲ್ಲಾ ತಮ್ಮ ತಮ್ಮ ಊರುಗಳಿಗೆ ಹೋಗುತ್ತಿರುವಾಗ ಕೆಲವರು ಮಾತನಾಡಿಕೊಳ್ಳುತ್ತಿದ್ದರು. ಸತ್ಯ ಅದೆಷ್ಟು ಕಠೋರ ಆದರೂ ಸಂತೋಷ ನೀಡುವಂತಹುದು. ಹರಿಶ್ಚಂದ್ರ ತನ್ನ ಬದುಕಿನುದ್ದಕ್ಕು ಪಾಲಿಸಿದ ಧರ್ಮದಿಂದ ಜನಮಾನಸದಲ್ಲಿ ಅವನೆಷ್ಟು ಚಿರಸ್ಥಾಯಿಯಾದ ಎಂದು ಮಾತನಾಡಿಕೊಳ್ಳುತ್ತಿದ್ದರು. ಸಮೀಪದಲ್ಲಿ ಇನ್ನೊಂದು ಗುಂಪು ಬದುಕಿನಲ್ಲಿ ಎಂದಿಗೂ ಸತ್ಯವನ್ನಾಡಬಾರದು. ಸತ್ಯವನ್ನಾಡಿದ ಹರಿಶ್ಚಂದ್ರ, ರಾಜ್ಯ ಕಳೆದುಕೊಂಡ, ಧನ, ಕನಕ, ಹೆಂಡತಿ, ಮಕ್ಕಳನ್ನು ಕಳೆದುಕೊಂಡ. ಸತ್ಯವಾಕ್ಯಕ್ಕಾಗಿ ಹೆಂಡತಿಯನೇ ಹರಾಜು ಹಾಕಿದ. ತನ್ನ ಕೊನೆಯ ಕಾಲದಲ್ಲಿ ಒಳ್ಳೆಯದು ಸಿಕ್ಕಿದರೆಷ್ಟು? ಬಿಟ್ಟರೆಷ್ಟು? ಅದನ್ನು ಅನುಭವಿಸುವ ವಯಸ್ಸು ಇರುವುದಿಲ್ಲ. ಆದುದರಿಂದ ಇನ್ನೆಂದಿಗು ಸತ್ಯವನ್ನೇ ನುಡಿಯಬಾರದೆಂದು ಆ ಗುಂಪು ಚರ್ಚಿಸತೊಡಗಿತು. ಮನುಷ್ಯನಿಗೆ ಭಗವಂತ ಚಿಂತಿಸುವ ಶಕ್ತಿ ನೀಡಿದ್ದಾನೆ. ಅದಕ್ಕೆ ಚಾಲನೆ, ಸರಿಯಾದ ಮಾರ್ಗ ಅಗತ್ಯ. ದಿನಕ್ಕೊಂದಿಷ್ಟು ಸತ್ಯದ ಮಾರ್ಗ ಅನುಸರಿಸಿದರೆ ಸಾಧ್ಯವಾದಷ್ಟು ಗುರಿ ಸಾಧಿಸಬಹುದು. ಮಹಾತ್ಮರೆನಿಸಿಕೊಳ್ಳದಿದ್ದರೂ ಆ ಪಥದಲ್ಲೊಂದಿಷ್ಟು ಹೆಜ್ಜೆ ಗುರುತು ಮೂಡಿಸಬಹುದಲ್ಲವೇ? ಚಿಂತಿಸೋಣ....

**ಒಳಿತಿಗು ಕೆಡುಕಿಗು ಮನಸಿನ ಭಾವವೆ ಮುಖ್ಯ ನಡೆ**
**ಬದುಕಿಗೆ ಶ್ರೇಯವು ಒಳಿತಿನ ಭಾವವೆ ಸಖ್ಯವಿಡೆ**

* ಅಧ್ಯಕ್ಷರು, ಶ್ರೀ ಅರಮೇರಿ ಕಳಂಚೇರಿ ಮಠ, ವೀರರಾಜೇಂದ್ರಪೇಟೆ ತಾ॥, ಕೊಡಗು ಜಿಲ್ಲೆ–೫೭೧ ೨೧೮





# ಸಾಹಿತ್ಯ ತಾಂಬೂಲ

ಬಸವಾದಿ ಶರಣರ ಜೀವನ ಮೌಲ್ಯಗಳನ್ನು, ಕಾಯಕ–ದಾಸೋಹ ಸಿದ್ಧಾಂತವನ್ನು ಜೀವನದಲ್ಲಿ ಅಳವಡಿಸಿಕೊಂಡು ಕಾಯಕದಲ್ಲಿ ದೇವರನ್ನು ಕಾಣುತ್ತಿರುವ ಗೀತಾಂಜಲಿ ಗ್ರಾಫಿಕ್ಸ್ ಮಾಲೀಕರಾದ ಶ್ರೀ ನಾಗಸುಂದರ್ ಅವರದು ಅಪರೂಪದ ವ್ಯಕ್ತಿತ್ವ. ಸರಳತೆ, ಸಜ್ಜನಿಕೆ, ವಿನಯವಂತಿಕೆ, ಸಹನೆ, ಸಹೃದಯತೆ ಇವೆಲ್ಲದರ ಮೊತ್ತ ಶ್ರೀ ನಾಗಸುಂದರ್ ಎಂಬುದು ಅವರನ್ನು ಹತ್ತಿರದಿಂದ ಬಲ್ಲವರೆಲ್ಲರಿಗೂ ಅನುಭವ ವೇದ್ಯವಾದುದು.

ಶ್ರೀಯುತರಿಗೆ ಮಠಗಳ ಬಗ್ಗೆ, ಗುರುಗಳ ಬಗ್ಗೆ ಅಪಾರವಾದ ಭಕ್ತಿ, ಗೌರವ. ಅದರಲ್ಲೂ ವಿಶೇಷವಾಗಿ ಶ್ರೀ ಸಿದ್ಧಗಂಗಾ ಮಠದ ಬಗ್ಗೆ, ನಡೆದಾಡುವ ದೇವರೆಂದೇ ಜನಮಾನಸದಲ್ಲಿ ಹಚ್ಚಹಸಿರಾಗಿರುವ ತ್ರಿವಿಧ ದಾಸೋಹಿ, ಪದ್ಮಭೂಷಣ, ಪರಮಪೂಜ್ಯ ಡಾ. ಶ್ರೀ ಶ್ರೀ ಶಿವಕುಮಾರ ಮಹಾಸ್ವಾಮಿಗಳವರು ಹಾಗೂ ಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ಬಗ್ಗೆ ಅನನ್ಯ ಶ್ರದ್ಧಾ ಭಕ್ತಿಯನ್ನಿಟ್ಟುಕೊಂಡಿರುವ ಸದ್ಭಕ್ತರು. ಕಳೆದ ಇಪ್ಪತ್ತೊಂದು ವರ್ಷಗಳಿಂದ ಶ್ರೀಮಠದ ಮುದ್ರಣ ಸೇವೆಯನ್ನು ಶ್ರದ್ಧೆ, ನಿಷ್ಠೆಯಿಂದ ಮಾಡುತ್ತಾ ಬಂದಿದ್ದಾರೆ. ಶ್ರೀಮಠದ ಮುಖವಾಣಿಯಾಗಿರುವ 'ಸಿದ್ಧಗಂಗಾ' ಮಾಸಪತ್ರಿಕೆಯ ಹೊಸ ರೂಪತಾಳಲು ಹಾಗೂ ಪೂಜ್ಯ ಶ್ರೀಗಳವರ ವಜ್ರಮಹೋತ್ಸವ, ಅಮೃತ ಮಹೋತ್ಸವ, ಶತಮಾನೋತ್ಸವ ಸಂದರ್ಭದಲ್ಲಿ ಹೊರತಂದ ಮೌಲಿಕ ಗ್ರಂಥಗಳು ಸರ್ವಾಂಗ ಸುಂದರವಾಗಿ ಹೊರಬರಲು ಅದರ ಹಿಂದೆ ಅವರ ಪರಿಶ್ರಮ, ಅಪಾರವಾದ ಕಳಕಳಿ ಇದೆ.

ಶ್ರೀ ನಾಗಸುಂದರ್ ಅವರು ತಮ್ಮ ಪುತ್ರ ಚಿ॥ ತೇಜಸ್ ಅವರ ವಿವಾಹ ಶುಭ ಸಂದರ್ಭದಲ್ಲಿ ಪರಮಪೂಜ್ಯ ಡಾ. ಶ್ರೀ ಶಿವಕುಮಾರ ಮಹಾಸ್ವಾಮಿಗಳವರನ್ನು ಕುರಿತ ಸಂಕ್ಷಿಪ್ತ ಜೀವನ ಚರಿತ್ರೆಯನ್ನು ಮುದ್ರಿಸಿ, ವಿವಾಹ ಮಹೋತ್ಸವದಲ್ಲಿ ಪಾಲ್ಗೊಂಡವರಿಗೆಲ್ಲ ಉಚಿತವಾಗಿ ನೀಡುವುದರ ಮೂಲಕ ಪೂಜ್ಯ ಶ್ರೀಗಳವರ ಮೇಲಿನ ಅನನ್ಯ ಭಕ್ತಿಯನ್ನು ತಮ್ಮಲ್ಲಿನ ಸಾಹಿತ್ಯ ಪ್ರೇಮವನ್ನು ಪ್ರಚುರಪಡಿಸಿದ್ದಾರೆ.

ಹಿರಿಯ ಜಾನಪದ ವಿದ್ವಾಂಸರು, ಸಿದ್ಧಗಂಗಾ ಮಾಸಪತ್ರಿಕೆಯ ಸಹ ಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಪೂಜ್ಯ ಶ್ರೀಗಳವರನ್ನು ಕುರಿತು ಬರೆದ **'ಜಗದ ಜಂಗಮ ಬೆಳಗು'** ಗ್ರಂಥವನ್ನು ಏಪ್ರಿಲ್ 22 ರಂದು ಶ್ರೀ ನಾಗಸುಂದರ್ ಅವರು ನೂತನವಾಗಿ ನಿರ್ಮಿಸಿರುವ ಮನೆಯ ಗೃಹಪ್ರವೇಶ ಸಂದರ್ಭದಲ್ಲಿ ಪಾದಪೂಜೆಗೆ ದಯಮಾಡಿಸಿದಾಗ ತಮ್ಮ ಶಿವಹಸ್ತದಿಂದ ಲೋಕಾರ್ಪಣೆ ಮಾಡಿ, ಬಂದವರಿಗೆಲ್ಲ ನೀಡಿ ಆಶೀರ್ವದಿಸಿದರು. ಈ ಅವಿಸ್ಮರಣೀಯ ಸಂದರ್ಭವನ್ನು ಶ್ರೀ ನಾಗಸುಂದರ್ ಕುಟುಂಬದವರು ಧನ್ಯತಾಭಾವದಿಂದ ತಮ್ಮ ಜೀವನದಲ್ಲಿ ಒದಗಿದ ಮಹಾಭಾಗ್ಯ ಎಂದು ಸ್ಮರಿಸುತ್ತಾರೆ.

ಕಾಲ ಕಳೆದಂತೆ ಸಮಾರಂಭಗಳ ನೆನಪು ಜನರ ಸ್ಮೃತಿಪಟಲದಿಂದ ಮರೆಯಾಗುತ್ತದೆ. ಆದರೆ ಆ ಸಮಾರಂಭದ ಸಂದರ್ಭದಲ್ಲಿ ನೀಡಿದ ಸಾಹಿತ್ಯ–ತಾಂಬೂಲ ಜನರ ಮನಸ್ಸಿನಲ್ಲಿ ಸದಾ ಹಚ್ಚ ಹಸಿರಾಗಿರುತ್ತದೆ. ಗ್ರಂಥಗಳು ಜ್ಞಾನದಿಗಂತವನ್ನು ವಿಸ್ತರಿಸಿ ಅರಿವಿನ ಜ್ಯೋತಿಯನ್ನು ಬೆಳಗಿಸುತ್ತದೆ. ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆದಿರುವ

ನಾಡಿನ ಹಿರಿಯ ಜಾನಪದ ವಿದ್ವಾಂಸರು, ಚಿಂತಕರೂ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಡಾ. ಗೊ.ರು. ಚನ್ನಬಸಪ್ಪನವರು "ಈ ಗ್ರಂಥ ಲೇಖಕ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರದ್ದು ಕೇವಲ ಅಕ್ಷರ ಬರಹವಲ್ಲ, ಪೂಜ್ಯ ಸಿದ್ಧಗಂಗಾ ಶ್ರೀಗಳವರಲ್ಲಿ ಅವರು ಇಟ್ಟುಕೊಂಡಿರುವ ಅನನ್ಯ ಭಕ್ತಿಯ ರಸಾಭಿವ್ಯಕ್ತಿ. ಇಲ್ಲಿ ಪೂಜ್ಯರ ಬದುಕಿನ ಅನೇಕ ಹೃದಯಸ್ಪರ್ಶಿ ಘಟನೆಗಳಿವೆ. ಅವುಗಳನ್ನು ಲೇಖಕರು ಕೇಳಿ ದಾಖಲಿಸಿಲ್ಲ, ಕಂಡು ಅನುಭವಿಸಿ ದಾಖಲಿಸಿದ್ದಾರೆ. ಕನ್ನಡ ನೆಲದ ಸಾಮಾಜಿಕ, ಧಾರ್ಮಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಪೂಜ್ಯ ಶ್ರೀ ಶಿವಕುಮಾರ ಮಹಾಸ್ವಾಮಿಗಳವರ ಬದುಕೇ ಒಂದು ಅವಿಸ್ಮರಣೀಯ ಅಧ್ಯಾಯ. ಭಾವಶುದ್ಧಿ, ಬುದ್ಧಿಶಕ್ತಿ, ಚಿತ್ತಸಮತೆ, ಲೋಕಪ್ರಜ್ಞೆ, ಮತ್ತು ಆತ್ಮಧೃತಿಗಳ ಸಂಗಮವಾಗಿರುವ ಈ ಜಗದ ಜಂಗಮ ಬೆಳಗುವ ಬೆಳಕಿನಲ್ಲಿ ಬದುಕಿರುವ ನಾವು ಧನ್ಯರೆಂದೇ ಭಾವಸುತ್ತೇನೆ".

ಇಂಥ ಪರಮಪೂಜ್ಯ ಶ್ರೀಗಳವರನ್ನು ಕುರಿತು ಬರೆದ ಗ್ರಂಥವನ್ನು ಶ್ರೀ ನಾಗಸುಂದರ್ ಅವರು ಮುದ್ರಿಸಿ ಮದುವೆಗೆ ಬಂದವರಿಗೆಲ್ಲ ಜ್ಞಾನದಾಸೋಹವನ್ನು ಉಣಬಡಿಸಿದ್ದಾರೆ. ಇದೊಂದು ಅಪರೂಪದ ಶ್ಲಾಘನೀಯವಾದ ಕೊಡುಗೆ. ಡಾ. ಗೊ.ರು.ಚ. ಅವರು ಮುನ್ನುಡಿಯಲ್ಲಿ ಪ್ರಸ್ತಾಪಿಸಿರುವಂತೆ "ಈ ಪುಣ್ಯಚರಿತ್ರ ಗ್ರಂಥವನ್ನು ನನ್ನ ಆತ್ಮೀಯ, ಪ್ರಸಿದ್ಧ ಮುದ್ರಣೋದ್ಯಮಿಗಳು ಆದ ಶ್ರೀ ನಾಗಸುಂದರ್ ಅವರು ಪ್ರಕಟಿಸಿ ತಮ್ಮ ಮಗನ ಮದುವೆಯ ಸಂದರ್ಭದಲ್ಲಿ "ಸಾಹಿತ್ಯ ತಾಂಬೂಲ"ವಾಗಿ ವಿತರಣೆ ಮಾಡುತ್ತಿದ್ದಾರೆ ಎಂಬುದು. ಶ್ರೀ ನಾಗಸುಂದರ್ ಅವರು ಈ ರೂಪದಲ್ಲಿ ಪೂಜ್ಯ ಸಿದ್ಧಗಂಗಾ ಶ್ರೀಗಳಿಗೆ ತಮ್ಮ ಭಕ್ತಿ ಸಲ್ಲಿಸುತ್ತಿರುವುದು ನಿಜಕ್ಕೂ ಅಭಿನಂದನೀಯ" ಎಂದಿರುವುದು ಔಚಿತ್ಯಪೂರ್ಣವಾಗಿದೆ.

ಶ್ರೀ ನಾಗಸುಂದರ್ ಅವರ 'ಸಾಹಿತ್ಯ ತಾಂಬೂಲ' [illegible]ವೆ ಬೇರೆಯವರಿಗೆ ಪ್ರೇರಣೆ ನೀಡಲಿ, ಮದುವೆ, [illegible]ಪ್ರವೇಶ, ನಾಮಕರಣ ಮುಂತಾದ ಸಮಾರಂಭಗಳಲ್ಲಿ [illegible]ತ್ಯ ತಾಂಬೂಲವನ್ನು ನೀಡುವುದರಿಂದ ಓದುವ [illegible]ಸವನ್ನು ಬೆಳೆಸುವುದರ ಜೊತೆಗೆ ಅರಿವಿನ ದಿಗಂತವನ್ನು ವಿಸ್ತರಿಸುವಲ್ಲಿ ಸಹಕಾರಿಯಾಗುತ್ತದೆ. □

## 'ಸಿದ್ಧಗಂಗಾ' ಮಾಸಪತ್ರಿಕೆ ಆಜೀವ ಸದಸ್ಯರಲ್ಲಿ ಮನವಿ

ಶ್ರೀಮಠದ ಮುಖವಾಣಿ ಸಿದ್ಧಗಂಗಾ ಮಾಸಪತ್ರಿಕೆಗೆ ಆಜೀವ ಸದಸ್ಯರಾಗಿರುವುದು ಸಂತೋಷ. ಇದರಿಂದ 'ಸಿದ್ಧಗಂಗಾ' ನಿರಂತರವಾಗಿ ನಿಮ್ಮ ಮನ-ಮನೆ ಬೆಳಗುತ್ತಲಿದೆ. ತಮಗೆ ಮಠದ ಪರವಾಗಿ ಧನ್ಯವಾದಗಳು.

ಕಾಗದ, ಮುದ್ರಣ, ಅಂಚೆ ವೆಚ್ಚ ಇನ್ನಿತರೆ ವೆಚ್ಚಗಳು ದುಬಾರಿಯಾಗಿದ್ದು, ಪತ್ರಿಕೆ ಮುನ್ನಡೆಸಲು ಕಷ್ಟವಾಗಿದೆ.

ಪ್ರಾರಂಭಕ್ಕೆ ೫೦೦/- ರೂ, ೧೦೦೦/-ರೂ ಆಜೀವ ಸದಸ್ಯರಾಗಲು ಚಂದಾ ಸಂದಾಯ ಮಾಡಿದ್ದಿರಿ. ಇದರಿಂದ ಬ್ಯಾಂಕ್ ಠೇವಣಿಯಿಂದ ಬರುವ ಬಡ್ಡಿ ಕೇವಲ ೫೦/- ರೂ, ೧೦೦/- ಮಾತ್ರ. ಇಷ್ಟು ಕನಿಷ್ಠ ಹಣದಿಂದ ಪತ್ರಿಕೆ ಮುದ್ರಣ ತೊಡಕಾಗಿ ನಷ್ಟವಾಗುತ್ತಿದೆ. ಪ್ರಯುಕ್ತ ಈ ಆರ್ಥಿಕ ಕೊರತೆಯನ್ನು ದಯವಿಟ್ಟು ಅರ್ಥಮಾಡಿಕೊಳ್ಳುವಿರೆಂದು ಭಾವಿಸಿದ್ದೇವೆ.

ಪ್ರಸ್ತುತ ಆಜೀವ ಚಂದಾ ೨೦೧೪ ವರ್ಷದಿಂದ ೧೫೦೦/- ರೂ ನಿಗದಿ ಮಾಡಿದೆ. ಈ ಮೊತ್ತಕ್ಕೆ ಹೊಂದುವಂತೆ ಹಿಂದೆ ೫೦೦/- ರೂ ಸಂದಾಯ ಮಾಡಿರುವವರು ಬಾಕಿ ೧೦೦೦/- ರೂ ಸಂದಾಯ ಮಾಡಬೇಕು. ೧೦೦೦/- ರೂ ಸಂದಾಯ ಮಾಡಿರುವವರು ಬಾಕಿ ೫೦೦/- ಸಂದಾಯ ಮಾಡಲು ಕೋರಿದೆ.

ನಿಮಗೆ ಅನ್ವಯಿಸುವ ಬಾಕಿ ಚಂದಾ ಮೊತ್ತ ಸಿದ್ಧಗಂಗಾ ಮಾಸಪತ್ರಿಕೆ ಹೆಸರಿನಲ್ಲಿ ನಗದು/ಚೆಕ್/ಡಿ.ಡಿ. ಮೂಲಕ ತಪ್ಪದೆ ಪತ್ರಿಕೆ ಆಜೀವ ಸದಸ್ಯತ್ವದ LM ಸಂಖ್ಯೆ ಸೂಚಿಸಿ ದೂರವಾಣಿ/ಮೊಬೈಲ್ ನಂಬರ್ ನೊಂದಿಗೆ ಈ ಕೆಳಗಿನ ವಿಳಾಸಕ್ಕೆ ಕಳುಹಿಸಿ, 'ಸಿದ್ಧಗಂಗಾ' ಮುನ್ನಡೆಗೆ ಬಾಕಿ ಹಣ ಸಂದಾಯ ಮಾಡಿ ಸಹಕರಿಸಬೇಕಾಗಿ ಕಳಕಳಿಯಿಂದ ಪ್ರಾರ್ಥಿಸುತ್ತೇವೆ.

ಪ್ರಕಾಶಕರು, 'ಸಿದ್ಧಗಂಗಾ' ಮಾಸಪತ್ರಿಕೆ,
ಶ್ರೀ ಸಿದ್ಧಗಂಗಾ ಮಠ,
ತುಮಕೂರು ಜಿಲ್ಲೆ -೫೭೨ ೧೦೪.
ದೂರವಾಣಿ : 0816-2282322





ಶ್ರೀ ಸಿದ್ಧಗಂಗಾ ಮಠ, ತುಮಕೂರು

### ಶ್ರೀ ಸಿದ್ಧಗಂಗಾಮಠದ ನೀರು ಸರಬರಾಜು ಮತ್ತು ಒಳಚರಂಡಿ ವ್ಯವಸ್ಥೆಯ ಸಮಗ್ರ ಯೋಜನೆಗೆ ಶ್ರೀ ಸಿದ್ಧಗಂಗಾ ಗುರುಕುಲ ಡೆವಲಪ್‌ಮೆಂಟ್ ಟ್ರಸ್ಟ್‌ಗೆ ದೇಣಿಗೆ ನೀಡಿದ ದಾನಿಗಳು

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೧೧೬. | ಶ್ರೀ ಜೆ.ಪಿ. ರಾಜಣ್ಣ ಬೆಂಗಳೂರು | ೧,೦೦೧.೦೦ |
| ೧೧೧೭. | ಶ್ರೀ ಸಿ.ಎಂ. ರಂಗಸ್ವಾಮಯ್ಯ ತುಮಕೂರು | ೨,೦೦೦.೦೦ |
| ೧೧೧೮. | ಶ್ರೀ ಕೆ.ಹೆಚ್. ಜಯರಾಮಪ್ಪ ತುಮಕೂರು | ೧೦,೧೦೧.೦೦ |
| ೧೧೧೯. | ಪ್ರೊ. ಜಿ. ಪರಮೇಶ್ವರಪ್ಪ ಬೆಂಗಳೂರು | ೧,೦೦೧.೦೦ |
| ೧೧೨೦. | ಶ್ರೀ ಎಸ್. ನಂಜುಂಡಯ್ಯ ಗುಬ್ಬಿ | ೧,೦೦೨.೦೦ |
| ೧೧೨೧. | ಶ್ರೀ ಎ.ಸಿ. ಚಂದ್ರಪ್ಪ ತುಮಕೂರು | ೧,೦೦೧.೦೦ |
| ೧೧೨೨. | ಶ್ರೀ ಡಿ.ಎನ್. ಶಿವಶಂಕರಯ್ಯ ತುಮಕೂರು | ೨,೦೦೦.೦೦ |
| ೧೧೨೩. | ಶ್ರೀ ಬ್ಯಾಡನೂರು ಗೋವಿಂದಪ್ಪ ಬೆಂಗಳೂರು | ೧,೦೦೧.೦೦ |
| ೧೧೨೪. | ಶ್ರೀ ಕೆ. ನಾಗರಾಜು ಮಾದೇನಹಳ್ಳಿ | ೧,೦೧೦.೦೦ |
| ೧೧೨೫. | ಶ್ರೀ ಕೆ.ವಿ. ಪಾರ್ವತಮ್ಮ ಮತ್ತು ಡಿ.ವಿ. ಶಿವರುದ್ರಯ್ಯ ಬೆಂಗಳೂರು | ೧೦,೧೧೧.೦೦ |
| ೧೧೨೬. | ಶ್ರೀಮತಿ ಸುವರ್ಣ ಲೋಕೇಶಮೂರ್ತಿ ಬೆಂಗಳೂರು | ೧,೦೦೦.೦೦ |
| ೧೧೨೭. | ಶ್ರೀ ಡಿ.ಜೆ. ಶಂಕರಪ್ಪ ದೊಡ್ಡೇರಿ | ೨,೦೦೦.೦೦ |
| ೧೧೨೮. | ಶ್ರೀ ಶರಣ ಗೌಡರು ಕಟಗೇಶಪುರ | ೫,೧೦೦.೦೦ |
| ೧೧೨೯. | ಶ್ರೀ ಎಂ.ಎನ್. ಶಿವರುದ್ರಸ್ವಾಮಿ ಮಾದೇನಹಳ್ಳಿ | ೩,೫೦೧.೦೦ |
| ೧೧೩೦. | ಶ್ರೀ ತಿಮ್ಮೇಗೌಡ ತಿಪಟೂರು | ೧,೦೦೦.೦೦ |
| ೧೧೩೧. | ಶ್ರೀ ಎಸ್. ಮಂಜುನಾಥ ತುಮಕೂರು | ೧,೦೦೦.೦೦ |
| ೧೧೩೧. | ಶ್ರೀ ಸದಾನಂದ ಬೆಂಗಳೂರು | ೨,೦೦೦.೦೦ |
| ೧೧೩೨. | ಶ್ರೀ ಕೆ.ಟಿ. ಗರುಡಪ್ಪ ಕೆಂಕೆರೆಪಾಳ್ಯ | ೧,೦೦೧.೦೦ |
| ೧೧೩೩. | ಶ್ರೀ ಎಂ. ತಿಮ್ಮಯ್ಯ ಬೆಂಗಳೂರು | ೫,೩೦೦.೦೦ |
| ೧೧೩೪. | ಶ್ರೀ ತಿಮ್ಮಗಂಗಯ್ಯ ಬೆಂಗಳೂರು | ೧,೦೦೧.೦೦ |
| ೧೧೩೫. | ಶ್ರೀ ಎಂ.ಪಿ. ಕುಮಾರಸ್ವಾಮಿ ಹೊಳೆನರಸೀಪುರ | ೧,೦೦೦.೦೦ |
| ೧೧೩೬. | ಶ್ರೀ ಕೆ. ಚಂದ್ರಶೇಖರಯ್ಯ ಬಿಳೆಕಲ್ಲಹಳ್ಳಿ | ೧,೦೦೧.೦೦ |
| ೧೧೩೭. | ಶ್ರೀ ಬಸವರಾಜಯ್ಯ ಅಂಬಲಗೆರೆ, ಬೆಂಗಳೂರು | ೧೦,೦೦೦.೦೦ |
| ೧೧೩೮. | ಶ್ರೀ ಎನ್.ಪಿ. ಬಸವರಾಜು ನಕ್ಕನಹಳ್ಳಿ | ೧,೫೦೦.೦೦ |
| ೧೧೩೯. | ಶ್ರೀ ಎನ್.ಸಿ. ಬಸವರಾಜು ನಕ್ಕನಹಳ್ಳಿ | ೨,೦೦೦.೦೦ |
| ೧೧೪೦. | ಶ್ರೀ ಶಿವನಂಜಪ್ಪ ಐಗಲೂರು | ೧,೦೦೧.೦೦ |
| ೧೧೪೧. | ಶ್ರೀ ಕೆ. ರಾಮಚಂದ್ರ ಕ್ಯಾತ್ಸಂದ್ರ | ೧,೦೦೦.೦೦ |
| ೧೧೪೨. | ಶ್ರೀ ಬಿ. ಶಿವರುದ್ರಪ್ಪ ಕರೂರು | ೧,೦೦೦.೦೦ |
| ೧೧೪೩. | ಶ್ರೀ ಕೆ.ಎಲ್. ಶ್ರೀನಿವಾಸಯ್ಯ ಕೋಲಾಳ | ೫,೦೦೦.೦೦ |
| ೧೧೪೪. | ಶ್ರೀ ಕೆ.ಟಿ. ಹನುಮಂತಯ್ಯ ಬೆಂಗಳೂರು | ೧,೦೦೦.೦೦ |
| ೧೧೪೫. | ಶ್ರೀ ರೇವಣಸಿದ್ಧಪ್ಪ ಎಸ್. ಪಾಟೀಲ್ ಬಾಗೇವಾಡಿ | ೧೦,೦೦೦.೦೦ |
| ೧೧೪೬. | ಶ್ರೀ ವಿ.ಸಿ. ಪರಮಶಿವಯ್ಯ ಬೆಂಗಳೂರು | ೧,೦೦೦.೦೦ |
| ೧೧೪೭. | ಶ್ರೀ ಚನ್ನಬಸವಯ್ಯ ಮಲ್ಲರಬನವಾಡಿ | ೧,೦೦೦.೦೦ |
| ೧೧೪೮. | ಶ್ರೀ ಹೆಚ್.ಆರ್. ದಯಾನಂದ ತುಮಕೂರು | ೧,೦೦೦.೦೦ |
| ೧೧೪೯. | ಶ್ರೀ ಬಿ.ಎನ್. ಮಹಲಿಂಗಪ್ಪ ತುಮಕೂರು | ೧,೦೦೦.೦೦ |
| ೧೧೫೦. | ಶ್ರೀ ಎಂ. ಪರಶಿವಮೂರ್ತಿ ಮೂಗೂರು | ೧,೦೦೦.೦೦ |
| ೧೧೫೧. | ಶ್ರೀ ಶಿವ ಫಾರ್ಮ ಪಿ. ಶೀಲ ಮೈಸೂರು | ೫,೦೦೦.೦೦ |
| ೧೧೫೨. | ಶ್ರೀ ಹೆಚ್. ಹನುಮಂತರಾಜು ಬೆಂಗಳೂರು | ೧೦,೦೦೦.೦೦ |



## ದಾನಿಗಳ ಪಟ್ಟಿ



| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೧೫೩. | ಶ್ರೀ ಜಿ.ಹೆಚ್. ನಾಗಯ್ಯ<br>ಶಿವಮೊಗ್ಗ | ೧,೦೦೦.೦೦ |
| ೧೧೫೪. | ಶ್ರೀ ಕೆ.ವಿ. ವೀರಣ್ಣ<br>ಬೆಂಗಳೂರು | ೧೦,೦೦೦.೦೦ |
| ೧೧೫೫. | ಶ್ರೀ ಹೆಚ್. ವೆಂಕಟಪ್ಪ<br>ನಾಯಕರಹಟ್ಟಿ | ೧೦,೦೦೦.೦೦ |
| ೧೧೫೬. | ಶ್ರೀ ಸಿದ್ಧಲಿಂಗಪ್ಪ<br>ಬ್ರಹ್ಮಸಂದ್ರ | ೧,೧೦೧.೦೦ |
| ೧೧೫೭. | ಡಾ. ಡಿ. ಬಸವರಾಜಯ್ಯ<br>ಬೆಂಗಳೂರು | ೧೦,೧೦೦.೦೦ |
| ೧೧೫೮. | ಶ್ರೀ ಎಂ. ಸಿದ್ಧಲಿಂಗಯ್ಯ<br>ತೊರೆನಾಗಸಂದ್ರ | ೧,೦೦೦.೦೦ |
| ೧೧೫೯. | ಶ್ರೀ ಟಿ.ಸಿ. ಪಾಲಾಕ್ಷಮೂರ್ತಿ<br>ಹೊಳೆನರಸೀಪುರ | ೧,೦೦೧.೦೦ |
| ೧೧೬೦. | ಬೇಬಿ ಹೆಚ್.ಪಿ. ಚಿನ್ಮಯ<br>ಬೆಂಗಳೂರು | ೧,೦೦೮.೦೦ |
| ೧೧೬೧. | ಶ್ರೀ ಎಸ್. ರೇಣುಕಯ್ಯ<br>ಮರೂರು | ೧,೦೦೧.೦೦ |
| ೧೧೬೨. | ಶ್ರೀ ಈಶ್ವರಪ್ಪ<br>ತಿಮ್ಮರಾಜಪುರ | ೧,೦೦೧.೦೦ |
| ೧೧೬೩. | ಶ್ರೀ ಮಂಜುನಾಥ<br>ಬೆಂಗಳೂರು | ೧,೦೦೦.೦೦ |
| ೧೧೬೪. | ಶ್ರೀ ಬಸಣ್ಣಗೌಡ<br>ಮುಕೊಡ್ಲ | ೧,೦೦೦.೦೦ |
| ೧೧೬೫. | ಶ್ರೀ ಕೆ. ಶಿವಣ್ಣ<br>ತುಮಕೂರು | ೧,೦೦೦.೦೦ |
| ೧೧೬೬. | ಶ್ರೀ ಕೆ.ವಿ. ಚಂದ್ರಶೇಖರಯ್ಯ<br>ಕ್ಯಾತಸಂದ್ರ | ೧,೦೦೦.೦೦ |
| ೧೧೬೭. | ಶ್ರೀ ಕೆಂಪಹನುಮಯ್ಯ<br>ಚಿಕ್ಕಕೊರಟಗೆರೆ | ೧,೧೧೦.೦೦ |
| ೧೧೬೮. | ಶ್ರೀ ಜ್ಯೋತಿ ಪ್ರಕಾಶ್ ಮೊಳಿ<br>ಬೆಂಗಳೂರು | ೨,೦೦೦.೦೦ |
| ೧೧೬೯. | ಶ್ರೀ ಸೋಮಣ್ಣ<br>ಕಡಬಗೆರೆ | ೧,೦೦೫.೦೦ |
| ೧೧೭೦. | ಶ್ರೀ ಎಸ್. ಚಂದ್ರಕಲಾ<br>ರಾಮನಗರ, ಐಜೂರು | ೧,೦೦೦.೦೦ |
| ೧೧೭೧. | ಶ್ರೀ ಡಿ.ಬಿ. ಚಂದ್ರಶೇಖರಪ್ಪ<br>ಚಿಕ್ಕಪಟ್ಟಣಗೆರೆ | ೧,೧೦೧.೦೦ |
| ೧೧೭೨. | ಶ್ರೀ ಸಿದ್ಧಣ್ಣ ಎಸ್. ಪಾಟೀಲ್<br>ನಾಗಪುರ, ಮಹಾರಾಷ್ಟ್ರ | ೧೧,೦೦೦.೦೦ |

| ಕ್ರಸಂ. | ಹೆಸರು ಮತ್ತು ಊರು | ಮೊತ್ತ |
|---|---|---|
| ೧೧೭೩. | ಶ್ರೀ ಎಸ್. ರುದ್ರಯ್ಯ<br>ಕ್ಯಾತ್ಸಂದ್ರ | ೧,೦೦೦.೦೦ |
| ೧೧೭೪. | ಶ್ರೀ ಬಿ.ಕೆ. ಲಿಂಗಯ್ಯ<br>ನೆಲಮಂಗಲ | ೩೬,೫೦೦.೦೦ |
| ೧೧೭೫. | ಶ್ರೀ ಎಂ. ಶಿವಕುಮಾರ್<br>ಮಂಡ್ಯ | ೧,೦೦೦.೦೦ |
| ೧೧೭೬. | ಶ್ರೀ ಮಹೇಶ್‌ಶಾಸ್ತ್ರಿ<br>ಲಿಂಗಸಗೂರು | ೧೬,೫೦೦.೦೦ |
| ೧೧೭೭. | ಶ್ರೀ ಶಿವಮ್ಮ ಚಂದ್ರಶೇಖರಯ್ಯ<br>ತುಮಕೂರು | ೧,೦೦೧.೦೦ |
| ೧೧೭೮. | ಶ್ರೀ ಸಿ. ಶಿವರುದ್ರಯ್ಯ<br>ಬೆಂಗಳೂರು | ೧,೦೦೧.೦೦ |
| ೧೧೭೯. | ಶ್ರೀ ಬಿ.ಎನ್. ಸಿದ್ಧನಂಜಪ್ಪ<br>ಬೆಂಗಳೂರು | ೧,೦೦೧.೦೦ |
| ೧೧೮೦. | ಶ್ರೀಮತಿ ಸುಮಿತ್ರ ರಾಜಶೇಖರಯ್ಯ<br>ಮೈಸೂರು | ೧,೦೦೧.೦೦ |
| ೧೧೮೨. | ಶ್ರೀ ಜೆ.ಎಸ್. ಪ್ರಕಾಶ್ ಶೆಟ್ಟಿ<br>ಕರೂರು | ೨,೦೦೦.೦೦ |
| ೧೧೮೩. | ಶ್ರೀ ಕೆ.ಎಂ. ನಟರಾಜು<br>ಕುರಚೂರು | ೧,೦೦೦.೦೦ |
| ೧೧೮೪. | ಶ್ರೀ ಹೆಚ್. ರೇವಣ್ಣ<br>ಬೆಂಗಳೂರು | ೧,೦೦೦.೦೦ |
| ೧೧೮೫. | ಡಾ. ನಿರಂಜನ ಹೆಚ್.ಬಿ.<br>ಬೆಂಗಳೂರು | ೧,೦೦೦.೦೦ |
| ೧೧೮೬. | ಶ್ರೀ ಮರುಳಸಿದ್ಧಯ್ಯ<br>ಬೆವೂರು | ೫,೦೦೦.೦೦ |
| ೧೧೮೭. | ಶ್ರೀಮತಿ ಶಕುಂತಲ ಜಯದೇವ್<br>ಬೆಂಗಳೂರು | ೧೫,೦೦೦.೦೦ |
| ೧೧೮೮. | ಶ್ರೀ ಮಾನಸನಿರಂಜನ್<br>ಬೆಂಗಳೂರು | ೧,೦೦೦.೦೦ |
| ೧೧೮೯. | ಶ್ರೀ ಹೆಚ್.ಎಸ್. ನಾಗರಾಜು<br>ಬೆಂಗಳೂರು | ೧,೦೦೦.೦೦ |
| ೧೧೯೦. | ಶ್ರೀ ಕೆ.ಸಿ. ಆಂಜನಪ್ಪ<br>ಬೆಂಗಳೂರು | ೧,೦೦೦.೦೦ |
| ೧೧೯೧. | ಶ್ರೀ ವೀರಭದ್ರಯ್ಯ ಕೊಳ್ಳಿ<br>ಕೊಟ್ಟೂರು | ೨,೦೦೦.೦೦ |
| ೧೧೯೨. | ಶ್ರೀ ಕೆ.ಹೆಚ್. ಗಂಗಯ್ಯ<br>ಕುಣಿಗಲ್ | ೧,೧೫೫.೦೦ |
| ೧೧೯೩. | ಶ್ರೀ ಆರ್. ಶಿವಣ್ಣ ಮೈಕೋ<br>ಬೆಂಗಳೂರು | ೧,೦೦೦.೦೦ |

*(ಮುಂದುವರೆಯುತ್ತದೆ)*



ಸ್ಥಾಪನೆ : 1995

ಶುಭಾಶಯಗಳೊಂದಿಗೆ
ಭಾರತೀಯ ರಿಸರ್ವ್ ಬ್ಯಾಂಕ್ ಲೈಸೆನ್ಸ್ ಪುರಸ್ಕೃತ

ದೂರವಾಣಿ : 2277267
ಫ್ಯಾಕ್ಸ್ : 2277267



**ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,**
ಬಿ.ಹೆಚ್.ರಸ್ತೆ, ತುಮಕೂರು-572 102

ಪ್ರಗತಿ ನೋಟ (31.03.2015 ರಲ್ಲಿದ್ದಂತೆ) ಮತ್ತು ಠೇವಣಿಗಳು (ಲಕ್ಷರೂ.ಗಳಲ್ಲಿ)

| | | | |
|---|---|---|---|
| ಸದಸ್ಯರ ಸಂಖ್ಯೆ | 4168 | ಸಾಲಗಳು | 7215.17 |
| ಪಾವತಿಯಾದ ಷೇರು ಬಂಡವಾಳ | 354.14 | ಹೂಡಿಕೆಗಳು | 3269.66 |
| ಆಪದ್ಧನ ಮತ್ತು ನಿಧಿಗಳು | 848.11 | ದುಡಿಯುವ ಬಂಡವಾಳ | 11167.58 |
| ಠೇವಣಿಗಳು | 9813.49 | ನಿವ್ವಳ ಲಾಭ (ತೆರಿಗೆ ನಂತರ) | 152.34 |

ಠೇವಣಿ ಮೇಲಿನ ಬಡ್ಡಿ ದರಗಳು

46 ದಿವಸಗಳಿಂದ 90 ದಿವಸಗಳವರೆಗೆ - ಶೇ. 6
91 ದಿವಸಗಳಿಂದ 180 ದಿವಸಗಳವರೆಗೆ - ಶೇ. 7
181 ದಿವಸಗಳಿಂದ 365 ದಿವಸಗಳವರೆಗೆ - ಶೇ. 8
1 ವರ್ಷ ಮೇಲ್ಪಟ್ಟು 2 ವರ್ಷದವರೆಗೆ - ಶೇ. 9
2 ವರ್ಷ ಮೇಲ್ಪಟ್ಟು 3 ವರ್ಷದವರೆಗೆ - ಶೇ. 10
3 ವರ್ಷ ಮೇಲ್ಪಟ್ಟು - ಶೇ. 9

ಹಿರಿಯ ನಾಗರಿಕರಿಗೆ,
ಒಂದು ವರ್ಷ ಮೇಲ್ಪಟ್ಟ ಠೇವಣಿಗಳ ಮೇಲೆ ½% ಅಧಿಕ ಬಡ್ಡಿ ದರವನ್ನು ಅವರ ಠೇವಣಿಗಳ ಮೇಲೆ ನೀಡಲಾಗುವುದು.
ಒಂದು ಲಕ್ಷದವರೆಗಿನ ಠೇವಣಿಗಳ ವಿಮಾ ರಕ್ಷಣೆ ಇದೆ. (ಡಿ.ಐ.ಸಿ.ಜಿ.ಸಿ.)
ಜಂಟಿಸಾಲ, ಗೃಹನಿರ್ಮಾಣ ಸಾಲ, ಆಸ್ತಿ ಅಡಮಾನ ಸಾಲ, ಹೊಸ/ಹಳೆಯ ವಾಹನಾಧಾರ ಸಾಲ, ಯಂತ್ರೋಪಕರಣ ಸಾಲ,
ವಸ್ತು ಬಳಕೆದಾರರ ಸಾಲ, ಮೀರಳೆತ, ವೇತನಾಧಾರ, ಚಿನ್ನಾಭರಣ ಸಾಲಗಳಿಗೆ ಬಡ್ಡಿದರ ಶೇ. 13 ರಿಂದ 15

ನೂತನ ಶಾಖೆಗಳು :

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಸಿದ್ಧಗಂಗಾ ಕಾಲೇಜ್ ಕ್ಯಾಂಪಸ್, ಗಾಂಧಿನಗರ
ಬಿ.ಹೆಚ್. ರಸ್ತೆ, ತುಮಕೂರು
ಫೋನ್ : 0816-2277273

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಹಾಸ್ಪಿಟಲ್ ರಸ್ತೆ, ದಾಬಸಪೇಟೆ (ಸೋಂಪುರ)
ನೆಲಮಂಗಲ ತಾ॥, ಬೆಂಗಳೂರು ಗ್ರಾಮಾಂತರ ಜಿಲ್ಲೆ
ಫೋನ್ : 080-7735409

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ಕೆ.ಎಸ್.ಆರ್.ಟಿ.ಸಿ. ಬಸ್ ಸ್ಟಾಂಡ್ ರಸ್ತೆ,
ಒಕ್ಕಲಿಗರ ಸಮುದಾಯ ಭವನದ ಎದುರು
ದೊಡ್ಡಬಳ್ಳಾಪುರ, ಬೆಂಗಳೂರು ಗ್ರಾಮಾಂತರ ಜಿಲ್ಲೆ.
ಫೋನ್ : 080-27622090

ಸಿದ್ಧಗಂಗಾ ಅರ್ಬನ್ ಕೋ-ಆಪರೇಟಿವ್ ಬ್ಯಾಂಕ್ ಲಿ.,
ವಿಜಯನಗರ ಶಾಖೆ. 27/1, 3ನೇ ಮುಖ್ಯ ರಸ್ತೆ, 3ನೇ ಅಡ್ಡರಸ್ತೆ,
ವಿಜಯನಗರ, ಬೆಂಗಳೂರು- 560 040
ಫೋನ್ : 080-23301270

ಶ್ರೀ ಟಿ.ಕೆ. ನಂಜುಂಡಪ್ಪ
ಅಧ್ಯಕ್ಷರು

ಶ್ರೀ ಕೆ.ಎಸ್. ಶಂಕರಯ್ಯ
ಉಪಾಧ್ಯಕ್ಷರು

ನಿರ್ದೇಶಕರು
ಶ್ರೀ ಮಹೇಶಪ್ಪ
ಶ್ರೀ ಎಸ್. ವಿಶ್ವನಾಥಯ್ಯ
ಶ್ರೀ ಚಿಕ್ಕಯ್ಯ. ಆರ್.
ಶ್ರೀಮತಿ ಮಂಜುಳಾ ಪ್ರಸಾದ್
ಶ್ರೀ ಡಾ. ಎಸ್. ಪರಮೇಶ್
ಶ್ರೀ ಡಾ. ಆರ್.ಸಿ. ಪುಟ್ಟಬುದ್ದಿ
ಶ್ರೀ ರಮೇಶ್ .ಸಿ.ಆರ್
ಶ್ರೀ ರಾಮಯ್ಯ
ಶ್ರೀ ಬಿ.ಎಸ್. ರುದ್ರೇಶಯ್ಯ
ಶ್ರೀ ಟಿ.ಎಮ್. ಸ್ವಾಮಿ
ಶ್ರೀಮತಿ ರೇಣುಕಾ ಲತಾ. ಎಸ್.

ಹೆಚ್.ಕೆ.ಶಿವಪ್ರಕಾಶ್
ವ್ಯವಸ್ಥಾಪಕರು

RNI No. 17139/69 "Siddaganga" Monthly - Postal Reg. No. L2/RNP/385/TMR/2015-17



ಪರಮಪೂಜ್ಯ ಶ್ರೀ ಶ್ರೀಗಳವರು ಗೀತಾಂಜಲಿ ಗ್ರಾಫಿಕ್ಸ್‌ನ ಮಾಲೀಕರಾದ ಶ್ರೀ ನಾಗಸುಂದರ್ ಅವರ ನೂತನ ಮನೆಯ ಗೃಹಪ್ರವೇಶಕ್ಕೆ ದಯಮಾಡಿಸಿದಾಗ ಶ್ರೀ ನಾಗಸುಂದರ್ ಕುಟುಂಬದವರು ಪಾದಪೂಜೆ ನೇರವೇರಿಸುತ್ತಿರುವುದು



ಪರಮಪೂಜ್ಯ ಶ್ರೀ ಶ್ರೀಗಳವರ ದಿವ್ಯಸಾನ್ನಿಧ್ಯದಲ್ಲಿ ಶ್ರೀ ನಾಗಸುಂದರ್ ಕುಟುಂಬದವರು



ಪರಮಪೂಜ್ಯ ಶ್ರೀ ಶ್ರೀಗಳವರು ಗೀತಾಂಜಲಿ ಗ್ರಾಫಿಕ್ಸ್‌ನ ಮಾಲೀಕರಾದ ಶ್ರೀ ನಾಗಸುಂದರ್ ಅವರ ಮನೆಯ ಗೃಹಪ್ರವೇಶಕ್ಕೆ ದಯಮಾಡಿಸಿದ ಶುಭ ಸಂದರ್ಭದಲ್ಲಿ ಗೀತಾಂಜಲಿ ಗ್ರಾಫಿಕ್ಸ್‌ನ ವತಿಯಿಂದ ಪ್ರಕಟವಾದ ಸಿದ್ಧಗಂಗಾ ಮಾಸಪತ್ರಿಕೆ ಸಹ ಸಂಪಾದಕರಾದ ಶ್ರೀ ಎಚ್.ಎಸ್. ಸಿದ್ಧಗಂಗಪ್ಪನವರು ಬರೆದ 'ಜಗದ ಜಂಗಮ ಬೆಳಗು' ಗ್ರಂಥವನ್ನು ಲೋಕಾರ್ಪಣೆ ಮಾಡಿ, ಅವಲೋಕಿಸುತ್ತಿರುವುದು



ಪರಮಪೂಜ್ಯ ಶ್ರೀ ಶ್ರೀಗಳವರು ಭಕ್ತರಿಗೆ ಗ್ರಂಥವನ್ನು ನೀಡಿ ಆಶೀರ್ವದಿಸುತ್ತಿರುವುದು. ಈ ಸಂದರ್ಭದಲ್ಲಿ ಶ್ರೀ ನಾಗಸುಂದರ್, ಕಣ್ಣೂರು ಮಠದ ಶ್ರೀಗಳವರು, ಶ್ರೀ ಎಂ. ರೇಣುಕಾರಾಧ್ಯ ಮೊದಲಾದವರು ಉಪಸ್ಥಿತರಿದ್ದರು



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರು ಶ್ರೀಮತಿ ಶಾರದ ಮತ್ತು ಶ್ರೀ ನಾಗಸುಂದರ್ ಹಾಗೂ ಶ್ರೀಮತಿ ರೇಖಾ ಮತ್ತು ಡಾ. ಲೋಕ ಪ್ರಕಾಶ್ ಮಕ್ಕಳ ವಿವಾಹ ಮಹೋತ್ಸವಕ್ಕೆ ಆಗಮಿಸಿದ ಶುಭ ಸಂದರ್ಭದಲ್ಲಿ ವಧು-ವರರಿಂದ ಪಾದಪೂಜೆ



ಪರಮಪೂಜ್ಯ ಶ್ರೀ ಶ್ರೀ ಸಿದ್ಧಲಿಂಗ ಮಹಾಸ್ವಾಮಿಗಳವರ ದಿವ್ಯ ಸಾನ್ನಿಧ್ಯದಲ್ಲಿ ಶ್ರೀ ನಾಗಸುಂದರ್ ಕುಟುಂಬದವರು ಹಾಗೂ ಡಾ. ಲೋಕ ಪ್ರಕಾಶ್ ಕುಟುಂಬದವರು